ಅವಳಿಗೆ ಒಳ್ಳೆಯ ಸಂಗತಿಗಳನ್ನು ಬಾಲ್ಯದಲ್ಲಿಯೇ ಕಲಿಸಿರಿ



# ನಿಯಮಿತವಾಗಿ ಫೋರ್‌ಹೆನ್ಸ್ ಟೂಥ್‌ಪೇಸ್ಟ್‌ನಿಂದ ಬ್ರಶ್-ಮಾಡುವುದರಿಂದ ಒಸಡುಗಳ ತೊಂದರೆಗಳನ್ನು ಹಾಗೂ ದಂತಕ್ಷಯವನ್ನು ತಡೆಯಲು ಸಾಧ್ಯ.




ಯಾಕೆಂದರೆ ಫೋರ್‌ಹೆನ್ಸ್ ಟೂಥ್‌ಪೇಸ್ಟ್ ಹಲ್ಲು ಮತ್ತು ಒಸಡು ಇವೆರಡರ ರಕ್ಷಣೆಯನ್ನು ಮಾಡುತ್ತದೆ. ದಂತವೈದ್ಯರಿಂದ ಸೃಷ್ಟಿಸಲ್ಪಟ್ಟ ಫೋರ್‌ಹೆನ್ಸ್ ಟೂಥ್‌ಪೇಸ್ಟ್‌ನಲ್ಲಿ ಒಸಡುಗಳಿಗಾಗಿ ವಿಶೇಷ ಘಟಕಗಳು ಇವೆ. ಒಸಡುಗಳ ತೊಂದರೆಗಳನ್ನು ಹಾಗೂ ದಂತಕ್ಷಯವನ್ನು ತಡೆಗಟ್ಟಲು ಅತ್ಯುತ್ತಮ ಉಪಾಯವೆಂದರೆ ದಿನಾಲೂ ಬೆಳಿಗ್ಗೆ ಮತ್ತು ರಾತ್ರಿ ನಿಯಮಿತವಾಗಿ ಫೋರ್‌ಹೆನ್ಸ್ ಟೂಥ್‌ಪೇಸ್ಟ್‌ನಿಂದ ಹಲ್ಲುಗಳನ್ನು ಉಜ್ಜಿ ಸ್ವಚ್ಛಗೊಳಿಸಬೇಕು. ಈ ಮಹತ್ವದ ಅಭ್ಯಾಸವನ್ನು ನಿಮ್ಮ ಮಗನಿಗೆ ಕಲಿಸಬೇಕಾದ ಸಮಯವು ಈಗಲೇ ಬಂದಿದೆ. ಅಹುದು, ಈ ವಯದಲ್ಲಿಯೇ, ಅವನಿಗೆ ಕಲಿಯಲು ಉತ್ಸಾಹವಿರುವಾಗಲೇ ಕಲಿಸಿರಿ. ಆದುದರಿಂದ, ಇಂದೇ ಪ್ರಾರಂಭಿಸಿರಿ.

**ಫೋರ್‌ಹೆನ್ಸ್‌ದಿಂದ ದಂತರಕ್ಷಣೆಯನ್ನು ಗೈಯುವ ಅಭ್ಯಾಸ ಬಾಲ್ಯದಲ್ಲಿದ್ದರೆ ಒಳ್ಳೆಯದು.**

**ಫೋರ್‌ಹೆನ್ಸ್**
ದಂತವೈದ್ಯರಿಂದ ಸೃಷ್ಟಿಸಲ್ಪಟ್ಟ ಟೂಥ್‌ಪೇಸ್ಟ್.

---

**ಉಚಿತ!** "ಹಲ್ಲುಗಳ ಮತ್ತು ಒಸಡುಗಳ ರಕ್ಷಣೆ" ಎಂಬ ಬೋಧಪ್ರದವಾದ, ವರ್ಣರಂಜಿತ ಪುಸ್ತಿಕೆಯು ಹತ್ತು ಭಾಷೆಗಳಲ್ಲಿ* ದೊರೆಯುತ್ತದೆ: ಮೇನರ್ಸ್ ಡೆಂಟಲ್ ಎಡ್ವೈಜರಿ ಬ್ಯೂರೋ, ಪೋಸ್ಟ್ ಬ್ಯಾಗ್ 10031, ಬೊಂಬಾಯಿ-1 ಬಿಆರ್. ಇವರಿಗೆ ಬರೆಯಿರಿ.

ಹೆಸರು ______________________ ವಯಸ್ಸು ______

ವಿಳಾಸ ______________________________



* 20 ಪೈಸೆ ಸ್ಟ್ಯಾಂಪು (ಅಂಚೆ ವೆಚ್ಚಕ್ಕಾಗಿ) ಕಳಿಸಿರಿ ಮತ್ತು ಇಂಗ್ಲಿಷ್, ಹಿಂದಿ, ಮರಾಠಿ, ಗುಜರಾತಿ, ಉರ್ದು, ಬಂಗಾಳಿ, ತಮಿಳು, ತೆಲುಗು, ಮಲಯಾಳಂ, ಕನ್ನಡ ಇವುಗಳಲ್ಲಿ ಯಾವ ಭಾಷೆಯ ಪುಸ್ತಿಕೆ ಬೇಕೋ ಅದರ ಕೆಳಗೆ ಗೆರೆ ಎಳೆಯಿರಿ.

92F-183D KAN

## ಬೆಳವಣಿಗೆಯನ್ನು ಉತ್ತೇಜನಗೊಳಿಸಲು ಟಾನಿಕ್ ಕೊಡಿರಿ



## ಆರೋಗ್ಯಪೂರ್ಣ ಪೋಷಣೆಗೆ ಪೌಷ್ಟಿಕಾಹಾರ ಕೊಡಿರಿ






### ಇವೆರಡನ್ನೂ ಒಳಗೊಂಡ

# ಶಾರ್ಕೋಫೆರಾಲ್ ಕೊಡಿರಿ

## ವಿಟಮಿನ್‌ಗಳು, ಖನಿಜ ಪದಾರ್ಥಗಳು, ಮಾಲ್ಟ್–ಇವುಗಳ ಪ್ರಭಾವಶಾಲಿ ಮಿಶ್ರಣ

ಶಾರ್ಕೋಫೆರಾಲ್ ಬೆಳವಣಿಗೆಗೂ ಆರೋಗ್ಯಕ್ಕೂ ಅಧಿಕ ಉತ್ತಮ. ಏಕೆಂದರೆ ಅದೊಂದು ಟಾನಿಕ್ ಮಾತ್ರವಲ್ಲ, ಪೌಷ್ಟಿಕಾಹಾರವೂ ಆಗಿದೆ. ಅದು ಪ್ರತಿಯೊಂದು ಚಮಚ ದಲ್ಲಿಯೂ ಬೇರೆ ಟಾನಿಕ್ ಅಥವಾ ಪೌಷ್ಟಿಕಾಹಾರಕ್ಕಿಂತ ಅಧಿಕ ವಿಟಮಿನ್ ಎ, ಡಿ, ಮತ್ತು ಆವಶ್ಯಕವಾದ ಬಿ ಕಾಂಪ್ಲೆಕ್ಸ್ ಅಂಶಗಳನ್ನು ಕೊಡುತ್ತದೆ, ಮಾತ್ರವಲ್ಲದೆ ಮುಖ್ಯ ಖನಿಜ ಪದಾರ್ಥಗಳಾದ ಕಬ್ಬಿಣ ಮತ್ತು ಕ್ಯಾಲ್ಸಿಯಂ ಇವನ್ನೂ ಕೊಡುತ್ತದೆ. ಆದ್ದರಿಂದ ಡಾಕ್ಟರುಗಳು ಸುಮಾರು 40 ವರ್ಷಗಳಿಂದ ಶಾರ್ಕೋಫೆರಾಲ್‌ನ್ನು ಶಿಫಾರಸು ಮಾಡುತ್ತಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ! ಶೀತ ಮತ್ತು ಬೇರೆ ದೈನಂದಿನ ಅಸ್ವಾಸ್ಥ್ಯಗಳ ವಿರುದ್ಧ ರಕ್ಷಣೆಯನ್ನೂ ನೀಡುತ್ತದೆ.

1 ಕಿಲೋ ಮತ್ತು 450 ಗ್ರಾಮ್‌ಗಳ ಬಾಟಲಿಗಳಲ್ಲಿ ದೊರೆಯುತ್ತದ.

**ಶಾರ್ಕೋಫೆರಾಲ್: ಭಾರತದ ಅತ್ಯಂತ ವಿಶ್ವಸನೀಯ ಹಾಗೂ ಅತ್ಯಧಿಕ ಮಾರಾಟವಾಗುವ ಮಾಲ್ಟ್-ಮೂಲ ಟಾನಿಕ್!**

*Alembic*

ಅಲೆಂಬಿಕ್ ಕೆಮಿಕಲ್ ವರ್ಕ್ಸ್ ಕಂಪೆನಿ ಲಿ.
ಉತ್ಕೃಷ್ಟ ಔಷಧಗಳಿಗಾಗಿ ವಿಶ್ವಾಸಪಾತ್ರ ಹೆಸರು

everest/206a/ACW KN



# ಚಂದಮಾಮ


ಸಂಸ್ಥಾಪಕರು : ನಾಗಿರೆಡ್ಡಿ

ಸಂಚಾಲಕರು : ' ಚಕ್ರಪಾಣಿ '


---

ಓದುಗರಲ್ಲಿ ವಿಜ್ಞಾಪನೆ:

ಬಾಂಗ್ಲಾ ದೇಶದ ನಿರಾಶ್ರಿತರ ಕಾರಣದಿಂದ ನಮ್ಮ ದೇಶವು ಬಹಳ ತ್ಯಾಗಗಳನ್ನು ಕೈಕೊಳ್ಳಬೇಕಾಗಿದೆ. ಅವರ ಪೋಷಣೆಗಾಗಿ ಸರಕಾರವು ಪತ್ರಿಕೆಗಳ ಮೇಲೆ ೨ ಪೈಸೇ ಎಕ್ಸಾಯಿಜ್ ಸುಂಕ ವಿಧಿಸಿರುತ್ತದೆ. ಇದನ್ನು ದೇಶಭಕ್ತಿಯುಳ್ಳ ಓದುಗರು ಭರಿಸುವರೆಂದು ನಂಬುವೆವು. ಅಂತೆಯೇ ಚಂದಮಾಮದ ಬೆಲೆಯನ್ನು ಇದೇ ಜನವರಿಯಿಂದ ೨ ಪೈಸೇ ಹೆಚ್ಚಿಸುತ್ತೇವೆ. ಅಂದರೆ ಚಂದಮಾಮವನ್ನು ೨ ಪೈಸೇ ಎಕ್ಸಾಯಿಜ್ ಸುಂಕಸಹಿತ ೬೨ ಪೈಸೇಗೆ ಕೊಂಡುಕೊಳ್ಳಲು ಪ್ರಾರ್ಥನೆ.

---


ಸಂಪುಟ: ೪೮] ಜನವರಿ '೭೨ [ಸಂಚಿಕೆ: ೧








# ಅಮರವಾಣಿ

ಸಂಪೂರ್ಣಕುಂಭೋ ನ ಕರೋತಿ ಶಬ್ದಂ
ಅರ್ಧೋ ಘಟೋ ಘೋಷಮುಪೈತಿ ನೂನಂ
ವಿದ್ವಾನ್ ಕುಲೀನೋ ನ ಕರೋತಿ ಗರ್ವಂ
ಗುಣೈರ್ವಿಹೀನಾ ಬಹು ಜಲ್ಪಯಂತಿ. ೧

ತುಂಬಿದ ಕೊಡ ಶಬ್ದಿಸದು; ಅರ್ಧ ತುಂಬಿದ ಕೊಡ ಬಹಳ ಶಬ್ದ ಮಾಡುತ್ತದೆ. ಕುಲೀನನೂ ವಿದ್ವಾಂಸನೂ ಆದವನಿಗೆ ಗರ್ವವಿರದು; ಗುಣವಿಲ್ಲದವರೇ ಜಂಬ ಹೊಡೆಯುವರು.

ಶ್ರುತಿರ್ವಿಭಿನ್ನಾ ಸ್ಮೃತಯಶ್ಚ ಭಿನ್ನಾ
ನೈಕೋ ಮುನಿರ್ಯಸ್ಯ ವಚೋ ಪ್ರಮಾಣಮ್
ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಂ
ಮಹಾಜನೋ ಯೇನಗತಃ ಸ ಪಂಥಾ ೨

ವೇದಗಳಲ್ಲಿ ಭೇದವಿದೆ, ಸ್ಮೃತಿಗಳಲ್ಲಿ ವ್ಯತ್ಯಾಸವಿದೆ, ಯಾವ ಮುನಿ ಹೇಳಿದ ಮಾತನ್ನಾದರೂ ಹೊಡೆದು ಹಾಕುವಂತಿಲ್ಲ. (ಅಂತೆಯೆ) ಧರ್ಮ ತತ್ವವು ನಿಗೂಢವಾದುದು, (ಆದುದರಿಂದ) ದೊಡ್ಡವರು ಹೇಳಿದುದೇ ದಾರಿ.

ನ ವೇತ್ತಿ ಯೋ ಯಸ್ಯ ಗುಣಪ್ರಕರ್ಷಂ
ಸತಂ ಸದಾ ನಿಂದತಿ ನಾತ್ರ ಚಿತ್ರಮ್
ಯಥಾ ಕಿರಾತೀ ಕರಿಕುಂಭಜಾತಾಂ
ಮುಕ್ತಾಂ ಪರಿತ್ಯಜ್ಯ ಬಿಭರ್ತಿ ಗುಂಜಾಮ್ ೩

ಒಬ್ಬರ ದೊಡ್ಡ ಗುಣವನ್ನು ಗ್ರಹಿಸಲಾಗದವನು ಅವರನ್ನು ಸದಾ ನಿಂದಿಸುತ್ತಿರುತ್ತಾನೆ. ಅದರಲ್ಲಿ ಆಶ್ಚರ್ಯವೇನಿಲ್ಲ. ಕಿರಾತ ಹೆಂಗುಸು ಆನೆಯ ಕುಂಭಸ್ಥಳದ ಮುತ್ತುಗಳನ್ನು ಬಿಟ್ಟು, ಗುಲಗಂಜಿ ಮಾಲೆಗಳನ್ನು ಧರಿಸುತ್ತಾಳೆ.

ವ್ಯತ್ಯಾಸಗಳು



# ಒಳ್ಳೇ ನ್ಯಾಯ!

ಒಂದಾನೊಂದು ಊರಿನಲ್ಲಿ ಒಬ್ಬ ರೈತನಿದ್ದ. ಒಂದುದಿನ ಅವನು ಗದ್ದೆಯಲ್ಲಿ ಉಳುಮೆ ಮಾಡುತ್ತಿದ್ದಾಗ ಅವನಿಗೊಂದು ಮುತ್ತು ದೊರಕಿತು. ಅದು ಬಹಳ ಬೆಲೆಬಾಳುವ ಮುತ್ತಿನಂತೆ ಅವನಿಗೆ ತೋರಿದರೂ, ಎಷ್ಟು ಬೆಲೆ ಬಂದೀತೆಂಬುದು ಅವನಿಗೆ ಗೊತ್ತಾಗಲಿಲ್ಲ. ಅದನ್ನು ಸುಮ್ಮನೆ ಒಳಗಿಟ್ಟುಕೊಳ್ಳುವುದರಿಂದ ಯಾವ ಪ್ರಯೋಜನವೂ ಇಲ್ಲದುದರಿಂದ, ಅದನ್ನು ರತ್ನಗಳ ವರ್ತಕನಿಗೆ ಮಾರಿಬಿಡೋಣವೆಂದುಕೊಂಡು ರೈತನು ಪಟ್ಟಣಕ್ಕೆ ಹೋದನು.

ಅಲ್ಲಿ ಒಬ್ಬ ರತ್ನಗಳ ವರ್ತಕನು ಆ ಮುತ್ತನ್ನು ಪರೀಕ್ಷಿಸಿ, ಅದು ಬೆಲೆಬಾಳುವ ರತ್ನವೆಂದು ಹೇಳಿ, ತಾನು ಅದಕ್ಕೆ ಇನ್ನೂರು ವರಹ ಕೊಡುತ್ತೇನೆಂದು ಹೇಳಿದನು. ಅದು ರೈತನು ಊಹಿಸಿಕೊಂಡುದಕ್ಕಿಂತಲೂ ಹೆಚ್ಚೇ. ಅದಕ್ಕೆ ಅಷ್ಟು ಬೆಲೆ ಬರುವುದಕ್ಕೆ ಅವನಿಗೆ ಬಹಳ ಸಂತೋಷವಾಯಿತು. ವರ್ತಕನು ಮುತ್ತನ್ನು ತೆಗೆದುಕೊಂಡು ಇನ್ನೂರು ವರಹಗಳನ್ನು ರೈತನಿಗೆ ಕೊಟ್ಟನು. ವರ್ತಕನ ನ್ಯಾಯಬುದ್ಧಿಯನ್ನು ತನ್ನೊಳಗೆ ಮೆಚ್ಚಿಕೊಳ್ಳುತ್ತ ರೈತನು ತನ್ನ ಗ್ರಾಮದದಾರಿ ಹಿಡಿದು ಹಿಂದಿರುಗುತ್ತಿದ್ದನು.

ರೈತನು ನಗರವನ್ನು ದಾಟಿ ಸ್ವಲ್ಪದೂರ ಹೋದನು. ಅದು ಗೊಂಡಡವಿಯ ದಾರಿಯಾಗಿತ್ತು. ಅಲ್ಲಿ ನಡೆಯುವಾಗ ಇಬ್ಬರು ಮುಸುಕಿನ ಕಳ್ಳರು ಎಲ್ಲಿಂದಲೋ ಅವನ ಮುಂದೆ ಬಂದು ಅಡ್ಡಗಟ್ಟಿ, ಮೇಲೆ ಬಿದ್ದು ಅವನ ಹತ್ತಿರವಿದ್ದ ಇನ್ನೂರು ವರಹಗಳನ್ನು ಎಳೆದುಕೊಂಡು ಓಡಿಹೋದರು.

ರೈತನು ಚಿಂತಿಸುತ್ತಾ ಪಟ್ಟಣಕ್ಕೆ ಹಿಂದಿರುಗಿ ರಕ್ಷಣಾಧಿಕಾರಿಯನ್ನು ಕಂಡು ಅವನೊಂದಿಗೆ ನಡೆದ ಎಲ್ಲಾ ಸಂಗತಿಯನ್ನೂ ಹೇಳಿದನು. ಅದನ್ನೆಲ್ಲ ಕೇಳಿದ ಮೇಲೆ ರಕ್ಷಣಾಧಿಕಾರಿಗೆ, ಒಂದು ವಿಷಯ ಆಶ್ಚರ್ಯವನ್ನುಂಟುಮಾಡಿತು. ರೈತನನ್ನು ಕಳ್ಳರು ದೋಚಿಕೊಂಡುದಕ್ಕಿಂತಲೂ ರತ್ನವರ್ತಕನ ನ್ಯಾಯವು ಅದ್ಭುತವೆನಿಸಿತು. ಎಷ್ಟು ಒಳ್ಳೆಯ ಮುತ್ತಾಗಾದರೂ ಇನ್ನೂರು ವರಹಗಳಿಗಿಂತ ಹೆಚ್ಚು ಬೆಲೆ ಇರಲಾರದು. ರೈತನು ಮಾರಿದ ಮುತ್ತು ಅಪರೂಪದ್ದೇ ಆದರೂ ವ್ಯಾಪಾರ ಮಾಡುವವನು ಅದರ ಪೂರ್ತಿ ದರವನ್ನು ಕೊಡುವುದಿಲ್ಲವಷ್ಟೆ? ಅದರ ಮೇಲೆ ರೈತನು ರತ್ನ ಪರೀಕ್ಷೆಯಲ್ಲಿ ನಿಪುಣನಲ್ಲ. ಬೇರೆಯವರಿಗೆ ತೋರಿಸಿ ಅದರ ಬೆಲೆ ನಿರ್ಣಯಿಸುವ ಗೊಡವೆಗೂ ಹೋದವ

ಡಿ. ಸುಬ್ರಹ್ಮಣ್ಯ

ನಲ್ಲಿ. ಅಂತಹವನ ಹತ್ತಿರ ಏನಾದರೂ ಕೊಂಡು ಕೊಳ್ಳುವಾಗ ವರ್ತಕರು ನಾಲ್ಕನೆಯ ಒಂದಂಶ-ಹೆಚ್ಚಾದರೆ ಎರಡಂಶ ಕೊಡಬಹುದು. ಪೂರ್ತಿ ಬೆಲೆ ಕೊಟ್ಟನೆಂದರೆ ಆಶ್ಚರ್ಯವೇ.

ಆ ವರ್ತಕನ ನ್ಯಾಯವನ್ನು ಪರೀಕ್ಷಿಸಬೇಕೆಂದು ರಕ್ಷಣಾಧಿಕಾರಿಗೆ ತೋರಿತು. ಆ ಪರೀಕ್ಷೆಯೊಂದಿಗೆ ಕಳ್ಳರನ್ನು ಹಿಡಿಯುವ ಏರ್ಪಾಡನ್ನೂ ಮಾಡಿದನು. ನಾಲ್ಕುದಿನ ಕಳೆದು ಬರುವಂತೆ ರೈತನಿಗೆ ಹೇಳಿ ಕಳುಹಿಸಿ ರಕ್ಷಣಾಧಿಕಾರಿ, ಒಬ್ಬ ಸಾಮಾನ್ಯ ಮನುಷ್ಯನ ಹಾಗೆ ವೇಷ ಬದಲಾಯಿಸಿಕೊಂಡು ಅದೇ ರತ್ನವರ್ತಕನ ಬಳಿಗೆ ಹೋಗಿ, ತನ್ನದು ಇಂತಹ ದಿಕ್ಕಿನಲ್ಲಿರುವ ಇಂತಹ ಗ್ರಾಮವೆಂಬುದನ್ನು ಹೇಳಿ, "ಅಯ್ಯಾ ನಮ್ಮ ಊರ ಜಮೀನ್ದಾರರಿಗೆ ಒಂದು ಉಂಗುರ ಮಾಡಿಸಿ ಕೊಡಬೇಕಾಗಿದೆ. ಅದರಲ್ಲಿ ಕೂಡಿಸಲು ಉತ್ತಮವಾದ ಒಂದು ಮುತ್ತು ಬೇಕಾಗಿತ್ತು. ಬೆಲೆ ಎಷ್ಟಾದರೂ ಚಿಂತೆಯಿಲ್ಲ. ಇದೆಯೆ?" ಎಂದು ಕೇಳಿದ.

ವರ್ತಕನು ಕೂಡಲೇ ರೈತನಿಂದ ತೆಗೆದುಕೊಂಡ ಮುತ್ತನ್ನು ತೆಗೆದು "ಇದು ನೋಡಿದಿರಾ? ನಿನ್ನೆ ತಾನೇ ಒಬ್ಬರ ಕೈಯಿಂದ ಇನ್ನೂರು ವರಹಗಳಿಗೆ ಕೊಂಡುಕೊಂಡೆ. ಮೇಲೆ ಇಪ್ಪತ್ತು ವರಹ ಲಾಭ ಹಾಕಿಕೊಂಡು ನಿಮಗೆ ಕೊಡುತ್ತೇನೆ. ಕೊಂಡುಕೊಳ್ಳಿ. ಉಂಗುರಕ್ಕೆ ತಕ್ಕ ಮುತ್ತು" ಎಂದನು. ವರ್ತಕನು ಪ್ರಾಮಾಣಿಕನೆಂಬುದಕ್ಕೆ ಸಂದೇಹವೇನೂ ಉಳಿಯಲಿಲ್ಲ. "ಸರಿ. ನನಗೆ ಅಲ್ಲಿ ಇಲ್ಲಿ ವಿಚಾರಿಸಲು ವ್ಯವಧಿ ಇಲ್ಲ. ಬೇಗ ಹೋಗಿ ಅಕ್ಕಸಾಲಿಗನಿಗೆ ಈ ಮುತ್ತನ್ನೇ ಕೊಟ್ಟುಬಿಡುತ್ತೇನೆ" ಎಂದು ಹೇಳಿ ರಕ್ಷಣಾಧಿಕಾರಿ ವರ್ತಕನಿಗೆ ಹಣವನ್ನು ಕೊಟ್ಟು, ತಾನು ಹೆಸರು ಹೇಳಿದ ಗ್ರಾಮದ ಕಡೆಗೇ ನಡೆಯತೊಡಗಿದನು.

ಅವನು ಊಹಿಸಿದಂತೆಯೇ ಆಯಿತು. ನಗರ ದಾಟಿ ಸ್ವಲ್ಪ ದೂರ ಹೋದ ಕೂಡಲೇ ಇಬ್ಬರು ಮುಸುಗಿನ ಕಳ್ಳರು ಎಲ್ಲಿಂದಲೋ ಬಂದು ಅವನ ಮೇಲೆ ಬಿದ್ದು ಅವನ ಕೈಯಲ್ಲಿದ್ದ ಮುತ್ತನ್ನು ಎಳೆದುಕೊಂಡರು. ಆ ಕೂಡಲೇ ರಕ್ಷಣಾಧಿಕಾರಿ ನಿಯಮಿಸಿದ್ದ ಭಟರು ಧಾವಿಸಿ ಬಂದು ಆ ಕಳ್ಳರನ್ನು ಹಿಡಿದು ಕಟ್ಟಿಹಾಕಿ ಅವರ ಮುಸುಗನ್ನು ತೆಗೆದರು. ಆ ಕಳ್ಳರು ಬೇರೆ ಯಾರೂ ಅಲ್ಲ, ಅದೇ ರತ್ನವರ್ತಕ ಮತ್ತು ಅವನ ಸೇವಕ.

ರತ್ನವರ್ತಕನು ತನ್ನ ವ್ಯಾಪಾರದಲ್ಲಿ ಅಷ್ಟೊಂದು ನ್ಯಾಯವಾಗಿ ಏಕೆ ನಡೆಯುವನೆಂಬುದರ ಗುಟ್ಟು ಈಗ ಬಯಲಾಯಿತು. ರಕ್ಷಣಾಧಿಕಾರಿ ರೈತನಿಗೆ ಇನ್ನೂರು ವರಹಗಳನ್ನು ಕೊಡಿಸಿ ವರ್ತಕನನ್ನು ವಿಚಾರಣೆಗೆ ಗುರಿಪಡಿಸಿ ಸೆರೆಮನೆಗೆ ಕಳುಹಿಸಿದನು.





# ನರಪಿಶಾಚಿ

ಒಂದು ಊರಿನಲ್ಲಿ ಒಬ್ಬ ಬಡವನಿದ್ದ. ಅವನ ಹೆಂಡತಿಯ ಹೆಸರು ಕಾಮಾಕ್ಷಿ. ಗಂಡನ ಬಡತನದೊಂದಿಗೆ ಅವಳೂ ಹೊಂದಿಕೊಂಡು ಬಿಟ್ಟಿದ್ದಳು, ಬಡತನಕ್ಕೆ ಜತೆಯಾಗಿ ಒಂಬತ್ತು ಮಂದಿ ಮಕ್ಕಳು ಅವಳಿಗೆ ಹುಟ್ಟಿದ್ದರು. ಗಂಡ ಹೆಂಡಿರಿಬ್ಬರೂ ಊರವರ ಚಾಕರಿಮಾಡಿಯೂ, ಭಿಕ್ಷೆ ಎತ್ತಿಯೂ ಸಂಸಾರವನ್ನೆಳೆಯುತ್ತ ಯಾವಾಗಲೂ ಅರೆಹಸಿವೆಯಿಂದಲೇ ಬದುಕಿಕೊಂಡಿದ್ದರು.

ಕಾಮಾಕ್ಷಿಗೆ ಒಬ್ಬಳು ಅಕ್ಕನಿದ್ದಳು. ಅವಳ ಹೆಸರು ಮೀನಾಕ್ಷಿ. ಅವಳು ಐಶ್ವರ್ಯವಂತರ ಮನೆಯ ಗೃಹಿಣಿಯಾದುದರಿಂದ ಸುಖಸಂಪನ್ನಳಾಗಿದ್ದಳು. ಅವರ ಮೇಲೆ ಗರ್ವವೂ ತಲೆತುಂಬ ಇತ್ತು, ದಾರಿದ್ರ್ಯವಲ್ಲಿರುವ ತನ್ನ ತಂಗಿಯನ್ನೂ, ಅವಳ ಮಕ್ಕಳನ್ನೂ ಕರೆದು ಒಂದು ಹೊತ್ತು ಊಟ ಹಾಕುವ ಪಾಪಕ್ಕೆ ಹೋದವಳಲ್ಲ. ಅವಳು ಇನ್ನೊಂದು ಊರಿನಲ್ಲಿದ್ದಳು.

ಶ್ರೀಮಂತಳಾದ ಮೀನಾಕ್ಷಿಗೆ ಒಬ್ಬಳು ಮಗಳಿದ್ದಳು. ಈ ಮಗಳಿಗೆ ಮದುವೆ ನಿಶ್ಚಯವಾಯಿತು. ಆಗ ಒಂದುದಿನ ಮೀನಾಕ್ಷಿ ಬಡ ತಂಗಿಯ ಮನೆಗೆ ಬಂದು, "ಕಾಮಾಕ್ಷಿ, ನನ್ನ ಮಗಳಿಗೆ ಮದುವೆ ನಿಶ್ಚಯವಾಗಿದೆ. ಮನೆಯಲ್ಲಿ ಕೆಲಸ ಬಹಳ. ನೀನು ಬಂದು ಸ್ವಲ್ಪ ಸಹಾಯ ಮಾಡಬೇಕು. ನಿನ್ನ ಮಕ್ಕಳನ್ನೂ ಗಂಡನನ್ನೂ ಕರಕೊಂಡು ಬಂದು ನಮ್ಮ ಮರ್ಯಾದಿ ತೆಗೆಯಬೇಡ. ನೀನೊಬ್ಬಳೇ ಬಾ" ಎಂದು ಹೇಳಿ ಹೊರಟು ಹೋದಳು.

ಮದುವೆಯ ಮುಂಚಿನದಿನ ಕಾಮಾಕ್ಷಿ ತನ್ನ ಅಕ್ಕನ ಊರಿಗೆ ಹೊರಟಳು. ಮಕ್ಕಳೆಲ್ಲಾ ನಾವೂ ಬರುತ್ತೇವೆ ಎನ್ನುತ್ತ ಅವಳ ಹಿಂದೆ ಬಿದ್ದರು.

"ನೀವೆಲ್ಲಾ ಬಂದರೆ ದೊಡ್ಡಮ್ಮ ನಿಮ್ಮನ್ನು ಓಡಿಸಿ ಬಿಡುತ್ತಾಳೆ. ನಾನು ಬರುವಾಗ ನಿಮಗೆಲ್ಲರಿಗೂ ಬಗೆಬಗೆಯ ತಿಂಡಿ ಭಕ್ಷ್ಯ ಎಲ್ಲಾ ತರುತ್ತೇನೆ" ಎಂದು ರಂಗು ಮಾಡಿ ಸಮಾಧಾನಪಡಿಸಿ ಅಕ್ಕನ ಮನೆಗೆ ಹೋದಳು. ತಾಯಿ ತಿಂಡಿ ತರುವಳೆಂಬ ಆಸೆಯಿಂದ ಮಕ್ಕಳೂ ಸುಮ್ಮನಾದರು.

ಮದುವೇ ಮನೆಯಲ್ಲಿ ಮೀನಾಕ್ಷಿ ಕಾಮಾಕ್ಷಿಗೆ ಅನೇಕ ನಿಬಂಧನೆಗಳನ್ನು ಹಾಕಿದಳು. ಕಾಮಾಕ್ಷಿ ಮದುಮಕ್ಕಳ ಕಡೆಯವರೊಂದಿಗೆ ಮಾತಾಡಬಾರದು. ಅವಳು ಮದುವೆಯ ಚಪ್ಪರಕ್ಕೂ ಬರ

ಶಾರದಾಮಾಧವ

ಕೂಡದು. ಹತ್ತು ಮಂದಿ ಸೇರಿದ ಪಂಕ್ತಿಯಲ್ಲಿ ಅವಳು ಊಟಕ್ಕೂ ಕೂಡ ಬಾರದು.

ನಿಜಕ್ಕೂ ಮೀನಾಕ್ಷಿ ತನ್ನ ತಂಗಿಯನ್ನು ಕರೆದದ್ದು ಚಾಕರಿ ಮಾಡಲಿಕ್ಕೆ ಹೊರತು ಮತ್ತಾವುದಕ್ಕೂ ಅಲ್ಲ. ಅವಳು ಇದ್ದವರ ಬಟ್ಟೆ ಬರೆಗಳನ್ನು ಒಗೆದು ಆರಿಸ ಬೇಕು ; ಮುಸುರೆ ತಿಕ್ಕಬೇಕು ; ಕಸಬಳಿಯಬೇಕು, ತೊಳೆಯಬೇಕು. ಇದೆಲ್ಲವನ್ನೂ ಅವಳು ಮಾಡು ತ್ತಿದ್ದಾಗ ನೋಡಿದವರೆಲ್ಲಾ ಅವಳನ್ನು ಕೆಲಸದವ ಳೆಂದೇ ತಿಳಿದರು. ಹೊತ್ತು ಹೊತ್ತಿಗೆ ಎಲ್ಲರ ಊಟ ಗಳೂ ಮುಗಿದ ಮೇಲೆ, ಎಂಜಲು ತೆಗೆದು ಶುದ್ಧಿ ಮಾಡಿ, ಉಳಿದದ್ದು, ತಣಿದದ್ದೋ, ನೀರು ಬೆರೆ ತದ್ದೋ, ತಾನು ತಿಂದು ಹೊಟ್ಟೆ ತುಂಬಿಸಿ ಕೊಳ್ಳು ವಳು. ಅದೇ ಅವಳ ಜೀವಕ್ಕೆ ಅಮೃತದ ಹಾಗಿದ್ದಿತು.

ಮದುವೆಯ ಗಡಿಬಿಡಿ ಮುಗಿಯುವವರೆಗೆ ಉಪ ಚಾಕರಿ ಮಾಡಿ, ಮುಗಿಸಿ, ಮನೆಗೆ ಹೊರಡುವಾಗ ಕಾಮಾಕ್ಷಿ ಮೂರು ನಾಲ್ಕು ದಿನಗಳಿಂದ ಕೂಡಿಸಿಟ್ಟಿದ್ದ, ಭಕ್ಷ್ಯಭೋಜ್ಯ ಪದಾರ್ಥಗಳನ್ನು ಒಂದು ಬುಟ್ಟಿಯಲ್ಲಿ ಹಾಕಿಕೊಂಡು ಹೊರಟಳು. ತಂಗಿಯ ತಲೆಯಮೇಲೆ ಬುಟ್ಟಿಯನ್ನು ನೋಡಿ ಮೀನಾಕ್ಷಿ ಗಬಗಬನೆ ಬಂದು "ಅದೇನೇ ಬುಟ್ಟಿಯಲ್ಲಿ ?" ಎಂದು ಕೇಳಿದಳು.

"ಹಳಸಿದ ತಿಂಡಿಗಳು ಅಕ್ಕಾ. ತಿನ್ನಲಿಕ್ಕೆ ಏನಾ ದರೂ. ತರುತ್ತೇನೆಂದು ಹುಡುಗರಿಗೆ ಹೇಳಿದ್ದೇನೆ. ಅವರೆಲ್ಲ ಆತುರದಿಂದ ಎದುರು ನೋಡುತ್ತಿರುತ್ತಾರೆ" ಎಂದಳು ಕಾಮಾಕ್ಷಿ ದೀನ ಸ್ವರದಿಂದ.

"ಚೆನ್ನಾಗಿದೆ, ಹಳಸಿ ಹೋಗುವಂಥಾದ್ದನ್ನು ಬಿಸಾಡುತ್ತಾರೇನೆ ? ದನಗಳ ಕಲಗಚ್ಚಿಗೆ ಹಾಕಿದರೆ ಅಮೃತದ ಹಾಗೆ ಕುಡಿಯೋದಿಲ್ಲವೆ ? ತಾ ಹೀಗೆ!" ಎನ್ನುತ್ತ ಆ ಬುಟ್ಟಿಯನ್ನು ಎಳೆದುಕೊಂಡು ಅದ ರಲ್ಲಿದ್ದುದನ್ನೆಲ್ಲಾ ಕಲಗಚ್ಚಿನೊಳಗೆ ಕೌಚಿ ಹಾಕಿ, "ಇನ್ನು ಹೋಗಮ್ಮ" ಎಂದಳು ಕಾಮಾಕ್ಷಿಗೆ.

ಕಾಮಾಕ್ಷಿಯ ಹೃದಯದಲ್ಲಿ ತಾಳಲಾರದಷ್ಟು ಆವೇದನೆಯುಂಟಾಯಿತು. ತನ್ನ ಅಕ್ಕನ ಮಗಳಿಗೆ ಮದುವೆಯಾದರೆ ತಾನು ಅಷ್ಟು ಚಾಕರಿ ಮಾಡಿ ಕೂಡಾ, ತನ್ನ ಮಕ್ಕಳಿಗೆ ತಿನ್ನಲಿಕ್ಕೇನೂ ಇಲ್ಲದೆ ಬರಿ



ಗ್ಯೆಯಲ್ಲಿ ಹೋಗುತ್ತಿದ್ದೇನೆ. ಇಂತಹ ದಟ್ಟ ದಾರಿದ್ರ್ಯದಲ್ಲಿ ಬದುಕುವುದಕ್ಕಿಂತ ಸಾಯುವುದೇ ಮೇಲು, ಎಂದು ಕೊಂಡಳು.

ಅವಳು ಯೋಚಿಸುತ್ತಾ ಉರಿಯುವ ಹೃದಯದೊಂದಿಗೆ ನಡೆಯುತ್ತಿದ್ದಾಗ, ಅವಳ ಕಾಲ ಬುಡಕ್ಕೆ ಏನೋ ಮೆತ್ತಗೆ ತಗಲಿತು. ಅವಳು ಸ್ವಲ್ಪವೂ ಹೆದರಲಿಲ್ಲ. ಬಗ್ಗಿ ನೋಡಿದಳು. ದಾರಿಗೆ ಅಡ್ಡವಾಗಿ ದಪ್ಪವಾದ ಒಂದು ಹಾವು ಸತ್ತುಬಿದ್ದಿತ್ತು. ಅದನ್ನು ನೋಡಿ ಸಾಯುವುದಕ್ಕೆ ಒಳ್ಳೆಯ ದಾರಿಯನ್ನು ದೇವರೇ ತೋರಿಸಿದನೆಂದುಕೊಂಡಳು. ಅವಳು ಆ ಹಾವಿನ ಶವದ ತಲೆಯನ್ನೂ, ಬಾಲವನ್ನೂ ಕೊಯ್ದು ಬಿಸುಟು ಉಳಿದ ಹಾವಿನ ಶರೀರವನ್ನು ತುಂಡು ತುಂಡು ಮಾಡಿ ಬುಟ್ಟಿಯೊಳಗೆ ಹಾಕಿ ಕೊಂಡು ಮನೆಗೆ ಹೋಗಿ ಸೇರಿದಳು.

ಮಕ್ಕಳು ಅವಳ ಸುತ್ತಲೂ ಕೂಡಿ, "ಏನು ತಂದೆಯಮ್ಮಾ ?" ಎಂದು ಮೇಲಿಂದ ಮೇಲೆ ಕೇಳ ತೊಡಗಿದರು. "ನಿಮಗಾಗಿ ದೊಡ್ಡಮ್ಮ ಮೀನುಗಳನ್ನು ಕೊಟ್ಟಳು. ಅದನ್ನು ಪಕ್ವಮಾಡಿ ನಿಮಗೆಲ್ಲಾ ಕೊಡುತ್ತೇನೆ" ಎಂದಳು ಕಾಮಾಕ್ಷಿ.

ಹೀಗೆ ಹೇಳಿ ಅವಳು ಹಾವಿನ ತುಂಡುಗಳನ್ನು ಗಡಿಗೆಯಲ್ಲಿ ಹಾಕಿ ನೀರು ಹಾಕಿ ಒಲೆಯ ಮೇಲಿಟ್ಟಳು. ಆಮೇಲೆ ಅವಳು ತನ್ನ ಗಂಡನನ್ನು ಕರೆದು, "ನಾನು ಹೋಗಿ ಎಲ್ಲಿಂದಾದರೂ ಇಷ್ಟು ಭಿಕ್ಷೆ ಎತ್ತಿಕೊಂಡು ಬರುತ್ತೇನೆ. ಈ ಗಡಿಗೆಯನ್ನು ಮಗುಚುತ್ತಾ ಒಲೇ ಹತ್ತಿರ ಕೂತುಕೊಳ್ಳಿ" ಎಂದು ಹೇಳಿ ಹೊರಗೆ ಹೊರಟುಹೋದಳು.

ಅವನು ಗಡಿಗೆಯೊಳಗಿನ ತುಂಡುಗಳನ್ನು ಮಗುಚುತ್ತಾ ಇರುವಾಗ, ಗಡಿಗೆಯಲ್ಲಿ ಕಲ್ಲಿನ ತುಂಡುಗಳು ತಿರುಗುತ್ತಿರುವಂತೆ ಕಟಕಟವೆಂಬ ಶಬ್ದವು ಬರ ತೊಡಗಿತು. ಅವನು ಆಶ್ಚರ್ಯಪಡುತ್ತ ಹೊರಕ್ಕೆ ಓಡಿ ಹೆಂಡತಿಯನ್ನು ಕೂಗಿ ಹಿಂದಕ್ಕೆ ಕರೆದನು.




ಅವಳು ಹಿಂದಿರುಗಿ ಬಂದು, ದೀಪದ ಸಹಾಯದಿಂದ ಗಡಿಗೆಯೊಳಗೆ ನೋಡಿದಾಗ ಹಾವಿನ ತುಂಡುಗಳೆಲ್ಲವೂ ಚಿನ್ನದ ತುಂಡುಗಳಂತೆ ಹೊಳೆಯುತ್ತ ಕಾಣಿಸಿದುವು. ಅವುಗಳನ್ನು ನೋಡಿ ಗಂಡ ಹೆಂಡಿರಿಗೆ ದಿಗ್ಭ್ರಮೆಯುಂಟಾಯಿತು. ಈ ಸಮಯದಲ್ಲಿ ಕಾಮಾಕ್ಷಿ ವಾಸ್ತವವಾಗಿ ನಡೆದ ಎಲ್ಲಾ ಸಂಗತಿಗಳನ್ನೂ ಗಂಡನೊಂದಿಗೆ ಹೇಳಿದಳು.

ಗಡಿಗೆಯಲ್ಲಿರುವುದಷ್ಟೂ ಚಿನ್ನದ ಗಟ್ಟಿಗಳೆಂದು ನಿರ್ಧರಿಸಿಕೊಂಡ ಮೇಲೆ, ಅದರದೊಂದು ತುಂಡನ್ನು ಶೆಟ್ಟಿಯಂಗಡಿಗೆ ತೆಗೆದುಕೊಂಡು ಹೋಗಿ ಮಾರಿದರು. ಶೆಟ್ಟಿ ಅದಕ್ಕೆ ತಕ್ಕ ಹಣವನ್ನೇ ಕೊಟ್ಟನು. ಆ ಹಣದಿಂದ ಅವರು ಅಡಿಗೇ ಪಾತ್ರಗಳನ್ನೂ, ಆಹಾರ ಪದಾರ್ಥಗಳನ್ನೂ, ಎಲ್ಲರಿಗೂ ಬೇಕಾದ ಬಟ್ಟೆಬರೆಗಳನ್ನೂ ಕೊಂಡುಕೊಂಡರು. ಮಕ್ಕಳೆಲ್ಲಾ ಹೊಸಬಟ್ಟೆಗಳನ್ನೂ, ಅಂಗಿಗಳನ್ನೂ ಹಾಕಿಕೊಂಡು, ಹೊಟ್ಟೆತುಂಬ ತಿಂದುಂಡು ನಿದ್ದೆ ಮಾಡಿದರು.

ಅಕಸ್ಮಾತ್ತಾಗಿ ಭಿಕ್ಷುಕರಂತಿದ್ದವರ ಬದುಕು ಬಂಗಾರದಂತಾದುದನ್ನು ನೋಡಿ ಊರಿನವರಿಗೆಲ್ಲಾ ಆಶ್ಚರ್ಯವಾಯಿತು. "ಈ ನಡುವೆ ಅಕ್ಕಯ್ಯನ ಮನೆ ಮದುವೆಗೆ ಹೋಗಿ ಬಂದಳಲ್ಲವೇ ಕಾಮಾಕ್ಷಿ? ಶ್ರೀಮಂತಳಾದ ಅಕ್ಕ ಇವಳಿಗೂ ಒಂದಿಷ್ಟು ಕೊಟ್ಟಿರಬೇಕು." ಎಂದರು ಕೆಲವರು. ಮತ್ತೆ ಕೆಲವರಿಗೆ ಏನೋ ಆಶ್ಚರ್ಯವೂ ಆಯಿತು.

ಕೆಲವರು ಹೋಗಿ ಮೀನಾಕ್ಷಿಯೊಂದಿಗೆ ಆ ಸಂಗತಿ ಕೇಳಿಯೂಬಿಟ್ಟರು. ದರಿದ್ರಳಾಗಿದ್ದ ತನ್ನ ತಂಗಿ ಸುಖವಾಗಿ ಬದುಕುತ್ತಿರುವುದನ್ನು ಕೇಳಿ ಮೀನಾಕ್ಷಿಗೆ ಅಸೂಯೆಯಿಂದ ತಾಳಲಾಗದ ಹೊಟ್ಟೆನೋವೆದ್ದು, ತಂಗಿಯ ಊರಿಗೆ ಓಡುತ್ತಾ ಬಂದಳು. ಅವಳು ಅಲ್ಲಿಯ ನ್ಯಾಯಾಧಿಕಾಯ ಹತ್ತಿರ, "ನನ್ನ ತಂಗಿ ನನ್ನ ಮನೆಯಿಂದ ಏನೋ ಕದ್ದುಕೊಂಡು ಬಂದಳು" ಎಂದು ಫಿರ್ಯಾದಿ ಮಾಡಿದಳು. ಕೂಡಲೇ ನ್ಯಾಯಾಧಿಕಾರಿ ಕಾಮಾಕ್ಷಿಯನ್ನು ಕರೆಯಿಸಿದನು. ಅಕ್ಕತಂಗಿಯರ ತಕರಾರನ್ನು ನೋಡಲು ಊರಿನ ಅನೇಕರೂ ಹಾಜರಾದರು.

ಕಾಮಾಕ್ಷಿ ನ್ಯಾಯಾಧಿಕಾರಿಯೊಂದಿಗೆ ನಡೆದುದನ್ನೆಲ್ಲಾ ನಡೆದ ಹಾಗೇ ಹೇಳಿದಳು. ನ್ಯಾಯಾಧಿಕಾರಿ ಆ ಗಡಿಗೆಯನ್ನು ಹೇಗಿದೆಯೋ ಹಾಗೆಯೇ ತರಲು ಹೇಳಿದನು. ಕಾಮಾಕ್ಷಿ ಗಡಿಗೆಯನ್ನು ತಂದು ನ್ಯಾಯಾಧಿಕಾರಿಯ ಮುಂದೆ ಇಟ್ಟಳು. ನ್ಯಾಯಾಧಿಕಾರಿ ಮೀನಾಕ್ಷಿಯನ್ನು ನೋಡಿ, "ಅಮ್ಮ, ದೇವರ ಮೇಲೆ ಪ್ರಮಾಣ ಮಾಡಿ ಈ ಗಡಿಗೆ ನಿನ್ನದೇ ಆದರೆ ಇದನ್ನು ನೀನು ಸಂತೋಷದಿಂದ ತೆಗೆದುಕೊಂಡು ಹೋಗು" ಎಂದನು.

ಹಾಗೆಯೇ ಆಣೆ ಹಾಕಿ ಮೀನಾಕ್ಷಿ ಆ ಗಡಿಗೆಯನ್ನು ಎತ್ತಿಕೊಂಡು ಸೊಂಟಕ್ಕೇರಿಸುವಾಗ, ಅದರೊಳಗಿನಿಂದ ಒಂದು ನಾಗರ ಹಾವು ತಲೆ ಹೊರಗೆ ಹಾಕಿ ಸಿಟ್ಟಿನಿಂದ ಭುಸ್ಸೆಂದು ಚೀರಿ ಮೀನಾಕ್ಷಿಯನ್ನು ಕಡಿಯಲು ಹೋಯಿತು.

"ಅಮ್ಮಾ!" ಎಂದು ಕರ್ಕಶವಾಗಿ ಕೂಗಿ ಮೀನಾಕ್ಷಿ ಗಡಿಗೆಯನ್ನು ಬಿಟ್ಟುಬಿಟ್ಟಳು. ಅದು ಕೆಳಗೆ ಬಿದ್ದು ಒಡೆದುಹೋಯಿತು. ಅಲ್ಲಿ ಚಿನ್ನದ ತುಂಡುಗಳೇ ಕಂಡುಬಂದುವಲ್ಲದೆ. ನಾಗರಹಾವಿನ ಜಾಡು ಎಲ್ಲಿಯೂ ಕಾಣಸಲಿಲ್ಲ.

ಇದನ್ನು ನೋಡಿದವರೆಲ್ಲರೂ ಮೀನಾಕ್ಷಿಯನ್ನು "ಛೀಛೀ" ಎಂದರು. ನ್ಯಾಯಾಧಿಕಾರಿ ಆ ಚಿನ್ನದ ತುಂಡುಗಳನ್ನು ಹೆಕ್ಕಿಕೊಳ್ಳಲು ಕಾಮಾಕ್ಷಿಗೆ ಅನುಮತಿ ಕೊಟ್ಟನು. ಅವಳು ಆ ಚಿನ್ನದ ಗಟ್ಟಿಗಳನ್ನೆಲ್ಲಾ ಹೆಕ್ಕಿಕೊಂಡು ಮನೆಗೆ ಹೊರಟು ಹೋದಳು. ಅಂದಿನಿಂದ ಅವಳೂ ಅವಳ ಗಂಡನೂ ಮಕ್ಕಳೂ ಯಾವ ಕೊರತೆಯೂ ಇಲ್ಲದೆ ಸುಖವಾಗಿ ಜೀವಿಸಿದರು.





# ಶಿಲಾರಥ

೧೫

[ ಖಡ್ಗ ಜೀವದತ್ತರು ನಿತ್ಯಾನಂದ ರಾಜನೊಂದಿಗೆ ಮಾತಾಡುತ್ತಿರುವಾಗ, ವಿಘ್ನೇಶ್ವರ ಪೂಜಾರಿ ರಕ್ಕಸಾನೆಯೊಂದಿಗೆ ಬಂದು ಖಡ್ಗ ಜೀವದತ್ತರನ್ನು ಫಕ್ಕನೆ ಬಂಧಿಸಿಬಿಟ್ಟನು. ಆನೆಯ ಪರೀಕ್ಷೆಗೆಂದು ಹೋಗಿಯೇ ಅವರು ಬಂಧನಕ್ಕೊಳಗಾದರು. ಆಮೇಲೆ ನಿತ್ಯಾನಂದನನ್ನು ಹಿಡಿಯಲು ಆಟವಿಕರು ಧಾವಿಸಿದರು. ]

ಆಟವಿಕರು ಕಿವಿಹರಿಯುವಂತೆ ಗರ್ಜಿಸುತ್ತಾ, ಕೂಗಾಡುತ್ತಾ ಈಟಿಗಳನ್ನೂ ಕತ್ತಿಗಳನ್ನೂ ಕುಣಿಸಿಕೊಂಡು ಅತಿರಭಸದಿಂದ ತಮ್ಮ ಕಡೆಗೆ ಬರುವುದನ್ನು ನೋಡುತ್ತಲೇ, ಯುದ್ಧದ ಹುರುಪಿನಿಂದ ತಿರುಗಿನಿಂತ ನಿತ್ಯಾನಂದನ ಸೈನಿಕರಿಗೆ ಮತ್ತೆ ಕೈಕಾಲು ನಡುಗತೊಡಗಿತು. ಅವರೆಲ್ಲ ಹಿಂದಿರುಗಿ ಪುನಃ ಓಡಿಹೋಗಲು ತೊಡಗಿದರು. ರಾಜನು ಎಷ್ಟೇ ಕೂಗಿ ಕೂಗಿ ಎಚ್ಚರಿಕೆ ಹೇಳಿದರೂ ಅವರು ಕಿವಿಗೆ ಹಾಕಿಕೊಳ್ಳಲಿಲ್ಲ. ಯಮನು ತನ ದೂತರೊಂದಿಗೆ ಓಡಿಬರುವ ದೃಶ್ಯ ಪ್ರತ್ಯಕ್ಷ ಕಾಣಿಸುತಿರುವಾಗ ರಾಜನ ಮಾತುಗಳು ಅವರಿಗೆ ಧೈರ್ಯವನ್ನೂಡಿಸಲಾರದೆ ಹೋದುವು. ರಾಜನು ಏರಿ ಕುಳಿತಿರುವ ರಥವನ್ನು ಸಾರಥಿ, ರಾಜನ ಆಜ್ಞೆಗಳಿಗೂ ಅಭಿಪ್ರಾಯಗಳಿಗೂ ಕಾಯದೆ ಪಟ್ಟಣದ ಕಡೆಗೆ ತಿರುಗಿಸಿ ನಾಗಾಲೋಟ ತೆಗೆಯುವಂತೆ ಕುದುರೆಗಳನ್ನು ಹುರುಡಿಸಿದನು.

"ಏನಪ್ಪಾ . ಇದು, ಸಾರಥೀ ? ನಾವು ಹೇಡಿಗಳಂತೆ ಯುದ್ಧರಂಗದಿಂದ ಓಡಿಹೋಗುತ್ತಿದ್ದೇವಲ್ಲಾ! ಇದರಿಂದ ಅಧಮನಾದ ವಿಘ್ನೇಶ್ವರ ಪೂಜಾರಿಗೆ ಇಮ್ಮಡಿ ಧೈರ್ಯ ಬರುತ್ತದೆ. ಇನ್ನು ಅವನು ನಮ್ಮ ನಗರದ ಮೇಲೆಯೇ ಬಂದು ಬಿದ್ದರೂ ಬೀಳ




ಬಹುದು. ಶತ್ರು ಶೇಷವು ಮಹಾಪ್ರಚಂಡವಾಯಿತು. ಅವರ ಮುಂದೆ ನಾವು ಹೇಡಿಗಳೆಂದು ಡಂಗುರ ಹೊಡೆದು ಸಾರಿದಂತಾಯಿತು" ಎಂದು ನಿತ್ಯಾನಂದ ರಾಜನು ಚಿಂತೆಯಿಂದ ಹೇಳಿದನು.

ಸಾರಥಿ ಒಂದೆರಡು ಕ್ಷಣ ಸುಮ್ಮನಿದ್ದು ತರುವಾಯ, "ಮಹಾರಾಜರೆ, ಇನ್ನು ಚಿಂತಿಸಿ ಪ್ರಯೋಜನವೇನಿಲ್ಲ. ಆ ಪಾಪಿ ಪೂಜಾರಿಯ ದೃಷ್ಟಿಯಲ್ಲಿ ನಾವು ಎಂದೋ ಅಲ್ಪರಾಗಿ ಹೋಗಿದ್ದೇವೆ. ಮೊದಲೇ ಸೋತಿರುವ ನಾವು ಅಲ್ಲೇ ನಿಂತು ಮಾಡುವುದಾದರೂ ಏನು? ಒಂದೋ ಪ್ರಾಣ ಕಳಕೊಳ್ಳಬೇಕು; ಇಲ್ಲವೇ ಅವನಕೈಗೆ ಬಂದಿಗಳಾಗಿ ಸಿಕ್ಕಿಬೀಳಬೇಕು. ಸುಮ್ಮನೆ ದುಸ್ಸಾಹಸಕ್ಕೆ ಹೋದ ಆ ಕ್ಷತ್ರಿಯ ವೀರರಿಬ್ಬರ ಗತಿ ಏನಾಯಿತು ನೋಡಿದಿರಾ? ಈಗ ನಾವು ಮೊದಲು ಈ ಗಂಡಾಂತರದಿಂದ ತಲೆ ತಪ್ಪಿಸಿಕೊಂಡು, ಆ ಮೇಲೆ ಉಪಾಯವನ್ನು ಆಲೋಚಿಸಬೇಕಾಗಿದೆ" ಎಂದನು.

"ಹೌದು ಪಾಪ. ಅವರು ನಮಗಾಗಿ ಜೀವದ ಹಂಗು ಬಿಟ್ಟು ಹೋರಾಡಿದರು. ವೀರರೆಂದರೆ ಅವರೇ ಸರಿ. ಇನ್ನು ಕ್ರೂರನಾದ ವಿಘ್ನೇಶ್ವರ ಪೂಜಾರಿ ಅವರನ್ನು ಕೊಂದು ಹಾಕದೆ ಬಿಡಲಾರ" ಎಂದು ಹೇಳಿ ನಿತ್ಯಾನಂದನು ಕತ್ತು ಹೊರಳಿಸಿ ಆ ಕಡೆಗೆ ನೋಡಿದನು.

ಅತ್ತ ಆಟವಿಕರು ವಿಘ್ನೇಶ್ವರ ಪೂಜಾರಿ ಕುಳಿತಿರುವ ಆನೆಯ ಮೇಲೆ ಖಡ್ಗವರ್ಮ ಜೀವದತ್ತರನ್ನು ಹಗ್ಗದಿಂದ ಕೈಕಾಲು ಕಟ್ಟಿ, ಅವರ ಮುಖಗಳಿಗೆ ಕಪ್ಪು ಬಟ್ಟೆಯನ್ನು ಮುಚ್ಚುತ್ತಿದ್ದರು. ನಿತ್ಯಾನಂದ ರಾಜನು ಆ ದೃಶ್ಯವನ್ನು ನೋಡುತ್ತಿರುವಾಗಲೇ ವಿಘ್ನೇಶ್ವರ ಪೂಜಾರಿ ಕೂಡಾ ತಲೆಯೆತ್ತಿ ಅವನ ಕಡೆಗೆ ನೋಡಿದನು. ಅವನ ಹೃದಯದೊಳಗೆ ತುಂಬಿದ ಕ್ರೋಧವು ಕಣ್ಣುಗಳಿಂದ ಕಿಡಿಗಳ ರೂಪದಲ್ಲಿ ಹಾರುವಂತಿದ್ದುವು. ಈ ದಿನ ತಾನು ಈ ರಾಜನನ್ನು ಹಿಡಿದು ಕೊಂದು, ಆನಂದಪುರ ನಗರವನ್ನು ಸೇರಿ ಸಿಂಹಾಸನದ ಮೇಲೆ ಕುಳಿತುಕೊಳ್ಳ ಬಹುದೆಂದು ವಿಘ್ನೇಶ್ವರ ಪೂಜಾರಿ ಅಂದುಕೊಂಡಿದ್ದನು. ಸದ್ಯ ಅವನ ಪ್ರಯತ್ನವು ವಿಫಲವಾಗಿ ಹೋಗಿತ್ತು. ರಾಜನು ತಪ್ಪಿಸಿಕೊಂಡುಬಿಟ್ಟ. ಆಕಸ್ಮಿಕವಾಗಿ ಬಂದಿದ್ದ ಸುಯೋಗವು ಹಾಳಾಗಿ ಹೋಯಿತು.

"ಈ ಇಬ್ಬರು ಯುವಕರು ನಮ್ಮ ಪಾಲಿಗೆ ಸೈಂಧವನಂತೆ ಅಡ್ಡ ನಿಂತು, ಆ ನಿತ್ಯಾನಂದನು ನಮ್ಮ ಕೈಗೆ ಸಿಕ್ಕದಂತೆ ಮಾಡಿಬಿಟ್ಟರು. ಆದರೂ ಇವರನ್ನು ಕೊಲ್ಲಬಾರದು. ಇವರನ್ನು ನಮ್ಮ ಪಕ್ಷಕ್ಕೆ ಸೇರಿಸಿಕೊಳ್ಳುವ ಉಪಾಯವನ್ನು ಆಲೋಚನೆ ಮಾಡಬೇಕು. ಇಬ್ಬರಿಗೂ ಬೋದ ತಪ್ಪಿದೆಯೋ? ಅಲ್ಲ ಪ್ರಾಣಬಿಟ್ಟೇ ಹೋಗಿಬಿಟ್ಟರೋ? ಸಾಯುವ ಹಾಗಿದ್ದರೆ ಬದುಕಿಸಬೇಕು. ಸ್ವಲ್ಪ ಪರೀಕ್ಷಿಸಿ ನೋಡಿರಿ!" ಎಂದ ವಿಘ್ನೇಶ್ವರ ಪೂಜಾರಿ.

ಕೂಡಲೇ ಆಟವಿಕರೊಳಗಿನ ಬೇರುನಾರಿನ ವೈದ್ಯ ಜ್ಞಾನಿಯೊಬ್ಬ, ಆನೆಯ ಮೇಲೆ ಹತ್ತಿದ. ಅವನು

ಖಡ್ಗವರ್ಮ ಜೀವದತ್ತರ ಮೂಗುಗಳಲ್ಲಿ ಬೆರಳಿಟ್ಟು ಲಾಭವಿಲ್ಲವೆಂಬಂತೆ ತಲೆಯಾಡಿಸಿದ. ಅಮೇಲೆ ಅವರ ಕೈಗಳನ್ನು ಹಿಡಿದು ನಾಡೀ ಪರೀಕ್ಷೆ ಮಾಡಿದ. ಅವರು ಬದುಕಿಯೇ ಇದ್ದಾರೆಂಬುದು ಆಗ ಅವನಿಗೆ ಗೊತ್ತಾಯಿತು. ನಾಡಿ ಬಹಳ ನಿಧಾನವಾಗಿ ಆಡಿಕೊಳ್ಳುತ್ತಿರುವುದರಿಂದ ಖಂಡಿತ ಬದುಕಿದ್ದಾರೆ.

"ಪೂಜಾರಿ ಪ್ರಭುಗಳೇ, ಇವರಿನ್ನೂ ಸಾಯಲಿಲ್ಲ. ನಾಡಿ ಆಡುತ್ತಾ ಇದೆ. ನಮ್ಮ ಕೈಯಿಂದ ತಿಂದ ಏಟಿಗೆ ಬೋದ ತಪ್ಪಿಹೋಗಿದೆ, ಅಷ್ಟೇ" ಎಂದ ಆಟವಿಕ ವೈದ್ಯ.

"ಹಾಗಾದರೆ ಬೇಗನೇ ಸಾಗಿರಿ. ನಮ್ಮ ಗುಹಾಲಯವನ್ನು ಸೇರಿದ ಕೂಡಲೇ ಇವರಿಗೆ ಕೊಡಬೇಕಾದ ಆಹಾರದ ವಿಷಯ ನೋಡೋಣ. ಇವರು ಮಹಾವೀರರು. ಬದುಕಿ ನಮ್ಮ ಪಕ್ಷದವರಾಗಿಬಿಟ್ಟರೆ, ಆನಂದಪುರ ಮಾತ್ರವಲ್ಲ, ಇನ್ನೂ ಅನೇಕ ರಾಜ್ಯಗಳನ್ನು ಕೂಡಾ ಜಯಿಸಿಬಿಡಬಹುದು. ಆದಷ್ಟು ಬೇಗ ನಮ್ಮ ಗುರಿಯನ್ನು ಮುಟ್ಟಬೇಕಾಗಿದೆ. ಈ ಐರಾವತಾನೆಯ ರಹಸ್ಯವನ್ನು ಬಹಳದಿನ ಮುಚ್ಚಿಟ್ಟಿರಲು ಸಾಧ್ಯವಿಲ್ಲ!" ಎಂದ ವಿಘ್ನೇಶ್ವರ ಪೂಜಾರಿ.

ಖಡ್ಗವರ್ಮ ಜೀವದತ್ತರು ವೈದ್ಯನು ಹೇಳಿದಂತೆ ಪೂರಾ ಬೋದವಿಲ್ಲದಂತಿರಲಿಲ್ಲ. ಅವರನ್ನು ಕಟ್ಟಿದ ಹಗ್ಗದ ಚುರುಚುರು ಬಾಧೆಯಿಂದಾಗುವ ಸಂಕಟವನ್ನು ಕಣ್ಣುಮುಚ್ಚಿ ಹಲ್ಲು ಕಚ್ಚಿ ಸಹಿಸಿಕೊಂಡಿದ್ದರು. ಅಲ್ಲದೆ ಅವರ ಮುಖದ ಮೇಲೆ ವಸ್ತ್ರದ ಮುಸುಕನ್ನು ಗಂಟು ಹಾಕಿದುದರಿಂದ ಶ್ವಾಸವಾಡಿಸಲೂ ಕಷ್ಟವಾಗುತಿದ್ದಿತು. ಈ ಸ್ಥಿತಿಯಲ್ಲಿರುವಾಗ ವಿಘ್ನೇಶ್ವರ ಪೂಜಾರಿ ಹೇಳಿದ ಮಾತುಗಳು ಅವರ ಕಿವಿಗೆ ಸ್ಪಷ್ಟವಾಗಿ ಕೇಳಿಸಿದ್ದುವು.

ಇಷ್ಟಾಗುವಾಗ ವಿಘ್ನೇಶ್ವರ ಪೂಜಾರಿಯ ಆನೆ ಅವರನ್ನು ಸಾಗಿಸಿಕೊಂಡು, ಸುಮಾರು ಅರ್ಧಗಂಟೆ ಏಗುಡುದಿಗುಡು ದಾರಿಯಲ್ಲಿ ನಡೆದು ಒಂದುಕಡೆ



ನಿಂತಿತು. ವಿಘ್ನೇಶ್ವರ ಪೂಜಾರಿ ಆನೆಯಿಂದಿಳಿದು ಆಟವಿಕ ಬಂಟರನ್ನು ಕುರಿತು, "ಇವರಿಬ್ಬರನ್ನೂ ಜಾಗ್ರತೆಯಿಂದ ಕೆಳಗಿಳಿಸಿ, ನಮ್ಮ ಗುಹಾಲಯದ ಈಶಾನ್ಯ ದಿಕ್ಕಿನಲ್ಲಿರುವ ಕಲ್ಲಿನ ಕೋಣೆಯಲ್ಲಿ ಮಲಗಿಸಿರಿ. ಕೈಕಾಲುಗಳ ಕಟ್ಟುಗಳನ್ನು ಬಿಚ್ಚಿಬಿಡಿ. ಸರಿಯಾಗಿ ಕೈಕಾಲಾಡಿಸಿಕೊಂಡು ಚುರುಕಾಗಲಿ. ಇವರಿಗೆ ನಾಲ್ಕು ದಿನಗಳಿಗಾಗುವಷ್ಟು ಆಹಾರವನ್ನೂ ನೀರನ್ನೂ ಅಲ್ಲಿರಿಸಿರಿ. ಅಷ್ಟರೊಳಗೆ ನಾವು ಸಾಧಿಸಬೇಕಾದ ಒಂದು ಮಹಾಕಾರ್ಯವಿದೆ. ಅದನ್ನು ಪೂರ್ತಿ ಮಾಡಿಬಿಡೋಣ" ಎಂದನು.

ಅದರಂತೆ ಆಟವಿಕ ಸೇವಕರು ಖಡ್ಗವರ್ಮ ಜೀವದತ್ತರನ್ನು ಆನೆಯ ಮೇಲಿನಿಂದ ಕೆಳಕ್ಕಿಳಿಸಿ, ಡೋಲಿಯಂತಹ ಪೆಟ್ಟಿಗೆಯಲ್ಲಿ ಮಲಗಿಸಿ ಹೊತ್ತುಕೊಂಡು ಹೋಗಿ ವಿಘ್ನೇಶ್ವರ ಪೂಜಾರಿ ಹೇಳಿದ ಕೋಣೆಯೊಳಗೆ ಇಳಿಸಿದರು. ಅವರ ಕೈಕಾಲುಗಳ ಕಟ್ಟುಗಳನ್ನು ಬಿಚ್ಚಿ, ಚಾಪೆಯಲ್ಲಿ ಮಲಗಿಸಿದರು. ಆದರೆ



ಮುಖದ ಮುಸುಕನ್ನು ಮಾತ್ರ ಬಿಚ್ಚಲಿಲ್ಲ. ನೀರನ್ನೂ ಆಹಾರ ಪದಾರ್ಥಗಳನ್ನೂ ಕೋಣೆಯ ಮೂಲೆಯಲ್ಲಿ ತಂದಿಟ್ಟು ಅವರೆಲ್ಲಾ ಹೊರಟುಹೋದರು. ಆಮೇಲೆ ಅಲ್ಲೆಲ್ಲೂ ಬೇರೆ ಯಾರೂ ಇಲ್ಲದಷ್ಟು ನಿಶ್ಶಬ್ದ ಕವಿಯಿತು.

ಅದುವರೆಗೆ ಸ್ವಲ್ಪ ಕೂಡ ಸ್ಮೃತಿ ಇಲ್ಲದವರಂತೆ ನಟಿಸಿಕೊಂಡಿದ್ದ ಖಡ್ಗವರ್ಮ ಜೀವದತ್ತರು, ತಮ್ಮ ಮುಖಗಳ ಮೇಲಿನ ಮುಸುಕನ್ನು ಕಿತ್ತು ಎಸೆದು ಎದ್ದು ಕುಳಿತರು.

ಕೋಣೆಯೊಳಗೆಲ್ಲಾ ಮುಸುಕು ಕತ್ತಲೆ ಕವಿದುಕೊಂಡಿತ್ತು. ಕಿಟಿಕಿ, ಖಿಂಡಿ, ಬಾಗಿಲುಗಳೊಂದೂ ಕಾಣಿಸಲಿಲ್ಲ. ಆದರೂ ಎಲ್ಲಿಂದಲೋ ಗಾಳಿಮಾತ್ರ ಒಳಗೆ ಪ್ರವೇಶಿಸಿಕೊಂಡಿತ್ತು. ಜೀವದತ್ತನು ಕೋಣೆಯೊಳಗೆಲ್ಲಾ ಒಂದುಸಾರಿ ಪರೀಕ್ಷಿಸಿ ನೋಡಿದನು. ಖಡ್ಗವರ್ಮನು ಆಶ್ಚರ್ಯದಿಂದ ತನ್ನ ಕತ್ತಿಯನ್ನೂ ಬಿಲ್ಲನ್ನೂ ತಡವತೊಡಗಿದನು. ಜೀವದತ್ತನ ದಂಡಾಯುಧವೂ ಅವನ ಸೊಂಟದಲ್ಲಿದ್ದಿತು. ಆಯುಧಗಳನ್ನು ತಮ್ಮೊಂದಿಗೆ ಇರಗೊಳಿಸಿದ್ದು ಆಶ್ಚರ್ಯವೇ.

"ನಮ್ಮ ಆಯುಧಗಳಿರುವುದನ್ನು ನೋಡಿ ಆಶ್ಚರ್ಯಪಡುವಿಯಾ ಖಡ್ಗ? ಆ ಪೂಜಾರಿ ನಮ್ಮ ಆಯುಧಗಳನ್ನು ಕಸಿದುಕೊಳ್ಳಲಿಲ್ಲ. ಕಾರಣ ಗೊತ್ತೇ ಇದೆ. ನಮ್ಮನ್ನು ಸ್ನೇಹಿತರನ್ನಾಗಿ ಮಾಡಿಕೊಂಡು, ಸ್ವಾರ್ಥವನ್ನು ಸಾಧಿಸಿಕೊಳ್ಳಲು ನೋಡುತಿದ್ದಾನೆ. ದುಷ್ಟತನದ ಮೊಟ್ಟೆ! ಇದಕ್ಕೆಲ್ಲ ಮೋಸ ಹೋಗಬಾರದು" ಎಂದ ಜೀವದತ್ತ.

ಖಡ್ಗವರ್ಮನು ಕೋಪದಿಂದ ಕತ್ತಿಯನ್ನು ಮೇಲೆತ್ತಿ, "ಆ ದುಷ್ಟನ ಪ್ರಯತ್ನ ಎಂತಹುದಾದರೂ ಇರಲಿ. ನಾನಂತೂ ಅವನನ್ನು ಜೀವದಿಂದ ಬದುಕಲು ಬಿಡಲಾರೆ. ವಿಂಧ್ಯಪರ್ವತಗಳ ಕಡೆಗೆ ನಮ್ಮ ಪಾಡಿಗೆ ನಾವು ಹೋಗುತ್ತಿದ್ದರೆ, ಸುಮ್ಮಸುಮ್ಮನೆ ಈ ತೊಂದರೆಗಳನ್ನೆಲ್ಲಾ ಅನುಭವಿಸುವ ಗ್ರಹಚಾರ ನಮಗೇಕೆ? ಇದಕ್ಕೆಲ್ಲ ಮೂಲ ಕಾರಣನಾದ ಈ ವಿಘ್ನೇಶ್ವರ ಪೂಜಾರಿಯನ್ನು ಮೊದಲು ತೀರಿಸಿಬಿಡಬೇಕು" ಎಂದನು.

"ಉಷ್, ಗಟ್ಟಿಯಾಗಿ ಮಾತಾಡಬೇಡ ಸದ್ಯ. ಕತ್ತಲೆಗೂ ಕಣ್ಣಿದ್ದೀತು, ಗೋಡೆಗಳಿಗೂ ಕಿವಿಯಿದ್ದೀತು. ಮೊದಲು ನಾವು ಇಲ್ಲಿಂದ ಪಾರಾಗಬೇಕಷ್ಟೆ? ಈ ಕೋಣೆಯ ವಿಶಾಲವೆಷ್ಟು? ಎಲ್ಲಾದರೂ ಬಾಗಿಲಿದೆಯೆ? ಖಿಂಡಿಯ ಸೂಚನೆಯಿದೆಯೆ? ಮೆಟ್ಟಿಲಿದೆಯೆ? ಗಾಳಿ ಹೇಗೆ ಬರುತ್ತದೆ? ಇದನ್ನೆಲ್ಲ ಪರೀಕ್ಷಿಸೋಣ" ಎಂದು ಜೀವದತ್ತನು ಎದ್ದು ಕಲ್ಲುಗೋಡೆಯನ್ನು ತಡವುತ್ತಾ ಸುತ್ತಲೂ ತಿರುಗಿದನು. ಗೋಡೆಯಲ್ಲಿ ಯಾವ ಬಿರುಕೂ ಕಾಣಿಸಲಿಲ್ಲ. ಒಂದರಮೇಲೊಂದು ಕೂಡಿಸಿದ ಕಲ್ಲುಗಳ ಸಂದುಗಳಿಂದಲೇ ಗಾಳಿ ಬರುತ್ತಿದೆ ಎಂದು ಗೊತ್ತಾಯಿತು. ಮೊದಲು ನೋಡುವಾಗ ಅದೊಂದು ಗುಹೆಯಂತೆ ಕಾಣಿಸುತಿತ್ತು. ಆದರೆ ತಡವಿನೋಡಿದಾಗ ಅದು

ಬಂಡೆಯಲ್ಲಾದ ಗುಹೆಯಲ್ಲವೆಂದೂ, ಕಲ್ಲಿನ ಮೇಲೆ ಕಲ್ಲು ಹೇರಿ ಈ ಕೋಣೆಯನ್ನು ಕಟ್ಟಿದ್ದಾರೆಂದೂ ತಿಳಿಯಿತು. ಕಲ್ಲುಗಳೆಲ್ಲ ದೊಡ್ಡವೇ.

ಜೀವದತ್ತನು ತನಗೆ ತೋರಿದುದನ್ನು ಖಡ್ಗವರ್ಮನಿಗೆ ಹೇಳಿ, "ಖಡ್ಗಾ, ಒಂದು ಸಂಗತಿ ನಿಶ್ಚಯ. ಪೂಜಾರಿಯಿಂದ ನಮ್ಮ ಪ್ರಾಣಕ್ಕೆ ಅಪಾಯ ಬರುವಂತಿಲ್ಲ. ಅಲ್ಲದೆ ಒಳ್ಳೆಯ ಆಹಾರ ಪದಾರ್ಥಗಳನ್ನೂ ನಮಗಾಗಿ ಒದಗಿಸಿದ್ದಾನೆ. ನಾವು ಆನೆಯ ಮೇಲೆ ಬಂಧಿತರಾಗಿರುವಾಗ ಅವನು ಹೇಳಿದ ಮಾತುಗಳಲ್ಲಿ ಎರಡು ಮಾತು ಮುಖ್ಯವಾಗಿವೆ. ಗಮನಿಸಿದೆಯಾ?" ಎಂದನು.

"ಆ ಮೂರ್ಖ ತನ್ನ ಸೇವಕರೊಂದಿಗೆ ಏನೇನೋ ಬೊಗಳಿಕೊಂಡಿದ್ದನು. ಅವನ ದೃಷ್ಟಿಯಲ್ಲಿ ಎಲ್ಲವೂ ಮುಖ್ಯವೇ" ಎಂದ ಖಡ್ಗವರ್ಮ.

"ನಮ್ಮ ದೃಷ್ಟಿಗೆ ಮುಖ್ಯವಾದ ಎರಡು ಮಾತುಗಳಿವೆಯಪ್ಪಾ. ಈ ಐರಾವತ ಆನೆಯ ರಹಸ್ಯವನ್ನು ಬಹಳದಿನ ಬಚ್ಚಿಡಲು ಸಾಧ್ಯವಿಲ್ಲ ಎಂಬುದೊಂದು; ಎರಡು ಮೂರು ದಿನಗಳೊಳಗೆ ಯಾವುದೋ ಒಂದು ಮಹಾಕಾರ್ಯ ಸಾಧಿಸುತ್ತಾನೆಂಬುದು ಇನ್ನೊಂದು" ಎಂದ ಜೀವದತ್ತ.

"ಇವರಲ್ಲಿ ದೊಡ್ಡ ರಹಸ್ಯವೇನಿದೆ ಮಣ್ಣು? ಒಂದೋ ಆ ಆನೆ ಐರಾವತ ಜಾತಿಯದಾಗಿದ್ದೀತು. ಇಲ್ಲದಿದ್ದರೆ ಅದು ಆನೆಯೇ ಅಲ್ಲ. ಇನ್ನು ಅವನು ಸಾಧಿಸುವ ಮಹಾಕಾರ್ಯವೆಂದರೆ, ಆನಂದಪುರದ ಸಿಂಹಾಸನದ ಮೇಲೆ ಕುಳಿತುಬಿಡುವುದು! ಗೊತ್ತೇ ಇದೆ" ಎಂದ ಖಡ್ಗವರ್ಮ.

"ಖಡ್ಗಾ! ನೀನು ಅನುಮಾನಿಸುವಂತೆಯೇ ನಾನೂ ಅನುಮಾನಿಸುತ್ತಿರುವುದು ನಿಜ. ಅದನ್ನು ಖಂಡಿತಪಡಿಸಿಕೊಳ್ಳಲು ಕಷ್ಟವೇನಿಲ್ಲ. ಈ ದಿನ ನಾವು ಇಲ್ಲಿಯೇ ವಿಶ್ರಾಂತಿ ತೆಗೆದುಕೊಂಡು, ನಾಳೆ ಬೆಳಗಾದ ಕೂಡಲೇ ಇಲ್ಲಿಂದ ಹೊರಬಿದ್ದು, ಈ



ವಿಘ್ನೇಶ್ವರ ಪೂಜಾರಿಗೆ ಸರಿಯಾದ ಬುದ್ಧಿ ಕಲಿಸಿಬಿಡೋಣ" ಎಂದ ಜೀವದತ್ತ.

"ಹಾಗೇ ಮಾಡುವ. ನಾಲ್ಕೈದು ದಿನಗಳಿಗೆ ಸಾಲುವಷ್ಟು ಹಣ್ಣು, ಗೆಣಸು, ಕಾಯಿಗಳನ್ನೂ, ಮತ್ತೇನನ್ನೋ ಇರಿಸಿದ್ದಾನೆ. ಪಾಪ, ನಮ್ಮನ್ನು ನಂಬಿದ್ದಾನೆ, ಆ ಪೂಜಾರೀ ಪುಣ್ಯಾತ್ಮ!" ಎಂದು ನಗುತ್ತಾ ಖಡ್ಗವರ್ಮನು ಬಾಳೆಯ ಹಣ್ಣುಗಳನ್ನು ಸುಲಿದು ಬಾಯಿಗೆ ಹಾಕಿಕೊಂಡನು. ಜೀವದತ್ತನೂ ಸ್ವಲ್ಪ ಉದರ ಪೂಜೆ ಮಾಡಿಕೊಂಡನು.

ಆ ಹಗಲು ಕಳೆಯಿತು. ಕೋಣೆಯೊಳಗೆ ಇನ್ನಿಷ್ಟು ಗಾಢಾಂಧಕಾರವು ಕವಿಯಿತು. ಜಗತ್ತನ್ನು ರಾತ್ರಿ ಮುಸುಕಿತೆಂದು ಗೊತ್ತಾಯಿತು. ಆಟವಿಕರು ಇಟ್ಟು ಹೋದ ಪ್ರಮಿದೆಗಳನ್ನು ಬೆಳಗಿಸಿ, ಆ ಬೆಳಕಿನಲ್ಲಿ ಖಡ್ಗವರ್ಮ ಜೀವದತ್ತರು ಅಲ್ಲಿರುವ ರೊಟ್ಟಿ ಚಟ್ನಿಗಳನ್ನು ತಿಂದು, ನೀರು ಕುಡಿದು ಸೊಗಸಾಗಿ ತೇಗಿದರು. ಆಮೇಲೆ ಅಲ್ಲಿದ್ದ ಚಾಪೆಯನ್ನು ಬಿಡಿಸಿಕೊಂಡು



ಹಾಯಾಗಿ ಮಲಗಿ ರಾತ್ರಿಯಿಡೀ ನಿದ್ದೆಮಾಡಿದರು. ಮರುದಿನ ಬೆಳಗ್ಗೆ ಆ ಕೋಣೆಯ ಹೊರಗಡೆ ಯಿಂದ ಕೇಳಿಸಿದ ದೊಡ್ಡ ಗದ್ದಲಕ್ಕೆ ಅವರಿಗೆ ಎಚ್ಚರ ವಾಯಿತು. ಆಟವಿಕರೆಲ್ಲ ನೂರರ ಸಂಖ್ಯೆಯಲ್ಲಿ ಗುಂಪುಗೂಡಿ ಏನೋ ಮಾತಾಡುತ್ತಿರುವ ಶಬ್ದವೇ ದೊಡ್ಡ ಗಲಾಟೆಯಂತೆ ಕೋಣೆಯೊಳಗೆ ಕೇಳಿ ಸುತ್ತಿತ್ತು. ಖಡ್ಗವರ್ಮ ಜೀವದತ್ತರು ಕಿವಿ ಗಳನ್ನು ನಿಗುರಿಸಿ ಲಕ್ಷ್ಯಗೊಟ್ಟು ಕೇಳಿದರೂ ಅವರು ಯಾವ ವಿಷಯವನ್ನು ಕುರಿತು ಮಾತಾಡುತ್ತಿರುವ ರೆಂಬುದು ಅರ್ಥವಾಗಲಿಲ್ಲ.

"ಜೀವಾ, ವಿಘ್ನೇಶ್ವರ ಪೂಜಾರಿ ಆಟವಿಕರ ಗುಂಪಿನೊಂದಿಗೆ ಎಲ್ಲಿಗೋ ಧಾಳಿ ಹೊರಡುತ್ತಾ ನೆಂದು ಕಾಣುತ್ತದೆ!" ಎಂದ ಖಡ್ಗವರ್ಮ.

"ಆ ಧಾಳಿ ಬೇರೆಲ್ಲಿಗೋ ಇರಲಿಕ್ಕಿಲ್ಲ, ಪಾಪದ ರಾಜ ನಿತ್ಯಾನಂದನನ್ನು ಹತಮಾಡಿ, ಆ ಸಿಂಹಾಸನದ ಮೇಲೇರಲಿಕ್ಕಾಗಿ ಆನಂದಪುರದ ಕಡೆಗೇ ದಂಡೆತ್ತಿ ಹೊರಡುತ್ತಾನೆಂದು ಕಾಣುತ್ತದೆ" ಎಂದ ಜೀವದತ್ತ.

"ಹಾಗಾದರೆ ನಾವು ಆ ದುಷ್ಟನಿಗೆ ಬಂದಿಗಳಾಗಿ ಕೈಮುಚ್ಚಿಕೊಂಡು ಈ ಕತ್ತಲೆ ಕೋಣೆಯಲ್ಲೇ ಇರ ಬೇಕೆ?" ಎಂದು ಖಡ್ಗವರ್ಮನು ಕೇಳಲು, "ಹಾಗೇಕೆ ಊತೇವು? ಆ ಗುಂಪಿನೊಂದಿಗೆ ಅವನು ಹೊರಟುಹೋದ ಕೂಡಲೇ ನಾವೂ ಈ ಕೋಣೆ ಯಿಂದ ಹೊರಡೋಣ. ಅದೆಲ್ಲ, ಬಲು ಸುಲಭ. ಹೊರಬಿದ್ದ ಮೇಲೆ ಪರಿಸ್ಥಿತಿಗೆ ತಕ್ಕ ಹಾಗೆ ಆಲೋಚಿ ಸೋಣ" ಎಂದ ಜೀವದತ್ತ.

"ಖಡ್ಗವರ್ಮನು ಆಶ್ಚರ್ಯದಿಂದ" ಈ ಕತ್ತಲೆ ಕೋಣೆಯೊಳಗಿನಿಂದ ಹೊರಗೆ ಹೋಗುವುದು ಅಷ್ಟೊಂದು ಸುಲಭವೆ?" ಎನ್ನಲು, "ಯಾಕಿಲ್ಲ? ನೋಡುತ್ತಾ ಇರು" ಎಂದು ಹೇಳಿ ಜೀವದತ್ತನು, ಗೋಡೆಯ ಸಂದುಗಳೆಡೆಯಿಂದ ಹೊರಕ್ಕೆ ನೋಡಿ ದನು. ಅವನ ಕಣ್ಣಿಗೆ ಐದಾರಡಿ ದೂರದಲ್ಲಿ ಅಂತಹುದೇ ಇನ್ನೊಂದು ಗೋಡೆ ಅಡ್ಡವಾಗಿರುವುದು ಕಂಡಿತು. ಹಾಗೆ ಮೂರು ಬದಿಗಳಲ್ಲಿಯೂ ಇದ್ದುವು.

"ಕಲ್ಲಿನ ಮೇಲೆ ಕಲ್ಲುಗಳು, ಗೋಡೆಗಳ ಬದಿ ಯಲ್ಲೇ ಗೋಡೆಗಳು! ಹೀಗಿದೆ ಈ ಗುಹಾಲಯದ ರಚನೆ. ಚಿಂತೆಯಿಲ್ಲ, ಹೊರಗೆ ಆಟವಿಕರ ಗುಂಪಿನ ಗಲಭೆ ತುಸುತಗ್ಗಲಿ. ಆ ಮೇಲೆ ನೋಡೋಣ" ಎಂದ ಜೀವದತ್ತ.

ಮತ್ತೆ ಸುಮಾರು ಅರ್ಧ ಗಂಟೆಯಲ್ಲಿ ಹೊರಗಿನ ಶಬ್ದಗಳು ದೂರದೂರ ವಾಗುತ್ತಾ ಹೋಗಿ ಪೂರ್ಣ ನಿಶ್ಶಬ್ದವಾಯತು. ಮತ್ತೇನಾದರೂ ಶಬ್ದ ಹೊರಡು ವುದೇ ಎಂಬ ಅನುಮಾನದಿಂದ ಸ್ವಲ್ಪ ಹೊತ್ತು ತಡೆದು, ಜೀವದತ್ತನು "ಖಡ್ಗಾ, ಈ ಕಲ್ಲು ಕೋಣೆ ಯಿಂದ ಹೊರಗೆ ಹೋಗಲು ರಂಧ್ರವೋ, ಸಂದೋ ಎಲ್ಲಿದೆ ಎಂದು ಹುಡುಕುತ್ತ ಹೊತ್ತು ಕಳೆಯುವು ದೇತಕ್ಕೆ? ನಿನ್ನೆ ಸಾಯಂಕಾಲ ನಮ್ಮನ್ನು ಇಲ್ಲಿ ಬಿಟ್ಟು ಹೋದವರು ನಮಗೆ ಕಾವಲಾಗಿ ಇದ್ದೇ ಇದ್ದಾರು.

ಅವರು ಯಾವ ಮಾರ್ಗದಲ್ಲಿ ಬಂದು ಹೋದರೋ. ಅದೇ ಮಾರ್ಗವನ್ನೇ ತೆರೆಯಿಸಿ ನಾವೂ ಹೋಗೋಣ. ನೀನುಮಾತ್ರ ಬೇರೆ ಉಪಾಯವಿಲ್ಲದಿದ್ದರೆ ಹೊರತು ಅವರನ್ನು ಕೊಂದುಗಿಂದು ಬಿಡಬೇಡ ! ಕೊಲ್ಲುವುದು ಸುಲಭ. ಕೊಂದ ಮೇಲೆ ಬದುಕಿಸಲು ಸಾಧ್ಯವಿಲ್ಲ ವಷ್ಟೆ ?" ಎಂದನು.

ಆಮೇಲೆ ಜೀವದತ್ತನು ಕೋಣೆಯ ಗೋಡೆಯ ಬದಿಯಲ್ಲಿ ತಿರುಗುತ್ತ ಅಲ್ಲಲ್ಲಿ ಗೋಡೆಗೆ ಬಾಯಿ ಹಚ್ಚಿ. ಗಟ್ಟಿಯಾದ ಶಬ್ದದಿಂದ "ವಿಘ್ನೇಶ್ವರ ಪೂಜಾರೀ ! ಓ ವಿಘ್ನೇಶ್ವರ ಪೂಜಾರೀ !" ಎಂದು ಕೂಗ ತೊಡಗಿದನು. ಖಡ್ಗವರ್ಮನು ಅವನ ಕಂಠ ದೊಂದಿಗೆ ತನ್ನ ಕಂಠ ಸ್ವರವನ್ನೂ ಬೆರೆಸಿದನು. ಅವರ ಕೂಗು ಭೂಮಿಯಡಿಯಿಂದ ಹೊರಡುವಂತೆ ಭಯಂ ಕರವಾಗಿ ಹೊರಗೆ ಕೇಳಿಸಿತು. ಅವರ ಶಬ್ದಕ್ಕೆ ಹೆದರಿ ಸಂದುಗೊಂದುಗಳಲ್ಲಿದ್ದ ಹಲ್ಲಿ ಹರಣೆಗಳು ಸರಭರನೆ ಆಚೆ ಈಚೆ ಓಡಿದುವು.

ಒಂದೆರಡು ನಿಮಿಷಗಳಲ್ಲಿ, ಗೋಡೆಯ ಒಂದು ಮೂಲೆಯಲ್ಲಿದ್ದ ಚೌಕದ ಕಲ್ಲೊಂದು ದೊಡ್ಡ ಶಬ್ದ ದಿಂದ ಬದಿಗೆ ಹೊರಳಿಕೊಂಡಿತು. ಆ ಸಂದಿನಲ್ಲಿ ಒಬ್ಬ ಆಟವಿಕ ಮನುಷ್ಯ ಒಳಕ್ಕೆಬಗ್ಗಿ, "ಏತಕ್ಕೆ ಗಂಟಲು ಹರಿದುಹೋಗುವ ಹಾಗೆ ಕೂಗುತ್ತೀರಿ ?" ಎಂದು ಬಹಳ ಕೋಪದಿಂದ ಕೇಳಿದ.

ಜೀವದತ್ತನು ಬಹಳ ಆಶ್ಚರ್ಯ ಪಡುವವನ ಹಾಗೆ ಆ ಮನುಷ್ಯನ ಕಡೆಗೆ ನೋಡುತ್ತ, ಮಿಂಚಿನ ವೇಗದಲ್ಲಿ ಅವನಕಡೆಗೆ ಹಾರಿ ಅವನ ಕುತ್ತಿಗೆಯನ್ನು ಹಿಡಿದುಕೊಂಡು, "ಬಲ ತೋರಿಸಿ ಉರುಳಾಡಿದರೆ ಕುತ್ತಿಗೆ ಹಿಸುಕಿ ಹಿಂಡಿಬಿಡುತ್ತೇನೆ ಎಚ್ಚರ ! ಪ್ರಾಣದ ಮೇಲೆ ಆಶೆ ಇದ್ದರೆ ನಾನು ಕೇಳುವ ಪ್ರಶ್ನೆಗಳಿಗೆ ಸಣ್ಣದನಿಯಲ್ಲಿ ಉತ್ತರ ಕೊಡು. ಮೊದಲು ಒಳಕ್ಕೆ ಬಾ" ಎನ್ನುತ್ತಾ ಅವನ ಭುಜಹಿಡಿದು ಒಳಕ್ಕೆ ಎಳೆದು ಗೋಡೆಯ ಬದಿಯಲ್ಲಿ ಒತ್ತಿ ಕುಳ್ಳಿರಿಸಿದನು. ಆಗ



ಜೀವದತ್ತನ ಭುಜಬಲವೆಷ್ಟೆಂಬುದು ಅವನಿಗೆ ಗೊತ್ತಾಗಿರಬೇಕು. ಆವನು ಪ್ರಾಣಭೀತಿಯಿಂದ ಗಡಗಡನೆ ನಡುಗ ತೊಡಗಿದ.

ಜೀವದತ್ತನು ಹೆದರ ಬೇಡವೆಂದು ಸನ್ನೆದೋರಿ ಅವನ ಭುಜವನ್ನು ತಟ್ಟಿ "ನಿಜ ಹೇಳು. ನೀನಲ್ಲದೆ ಇನ್ನೆಷ್ಟು ಮಂದಿ ಈ ಕೋಣೆಯನ್ನು ಕಾಯುತ್ತಿ ದ್ದೀರಿ ?" ಎಂದು ಕೇಳಿದನು.

"ನನ್ನ ಹೊರತು ಇನ್ನೊಬ್ಬನೇ ಇದ್ದಾನೆ. ಉಳಿದ ವರೆಲ್ಲಾ ಪೂಜಾರಿ ಪ್ರಭುಗಳೊಂದಿಗೆ ಕೂಡಿ ಆನಂದ ಪುರದ ಮೇಲೆ ಜಗಳಕ್ಕೆ ಹೋಗಿದ್ದಾರೆ" ಎಂದು ಸಣ್ಣ ದನಿಯಿಂದಲೇ ಹೇಳಿದ ಆಟವಿಕ.

"ಹಾಗೇನು ? ನೀನೀಗ ಆ ದ್ವಾರದ ಹತ್ತಿರ ಹೋಗಿ, ಎರಡನೆಯವನನ್ನು ಕೂಡಾ ಭಯವೇನಿಲ್ಲ ವೆಂದು ಹೇಳಿ ಒಳಕ್ಕೆ ಕರೆ. ಅವನಿಗೇನಾದರೂ ಬೇರೆ ವಿಧವಾಗಿ ಸನ್ನೆಗಿನ್ನೆ ತೋರಿಸಿದರೆ ನನ್ನ ಮಿತ್ರನ ಕತ್ತಿ ನಿನ್ನ ಬೆನ್ನಿನಲ್ಲಿ ತೂರುತ್ತದೆ. ಎಚ್ಚರ !" ಎಂದ

ಜೀವದತ್ತ. "ಹಾಗೆಯೇ ಆಗಲಯ್ಯಾ" ಎಂದು ಹೇಳಿ ಆಟವಿಕನು ಕಲ್ಲಿನಿಂದಾದ ಬಿಲಬಾಗಿಲಿನ ಬಳಿಗೆ ಹೋಗಿ ಹೊರಗೆ ತಲೆ ಹಾಕಿ ಅವನ ಜತೆಗಾರ ನನ್ನು ಒಳಗೆ ಬರುವಂತೆ ಕರೆದನು. ಈ ಸಮಯದಲ್ಲಿ ಖಡ್ಗ ವರ್ಮನು ತನ್ನ ಕತ್ತಿಯ ಮೊನೆಯನ್ನು ಅವನ ಬೆನ್ನಿಗೆ ಆನಿಸಿಕೊಂಡಿದ್ದನು. ಅವನು ಕರೆದಕೂಡಲೇ ಎರಡನೇ ಕಾವಲುಗಾರ ಕೂಡಾ ಆ ಬಾಗಿಲಿನಿಂದ ತೂರಿ ಒಳಕ್ಕೆ ಬಂದನು. ಒಳಗೆ ಬಂದ ಮೇಲೆಯೇ ತನ್ನ ಜತೆಗಾರನು ಒಳಗಿನ ಬಂದಿಗಳಿಬ್ಬರ ಕೈಯಲ್ಲಿ ಬಂದಿಯಾಗಿರುವನೆಂಬ ಸಂಗತಿ ಗೊತ್ತಾಯಿತು. ಅವನು ತಟಕ್ಕನೆ ಹಿಂದಿರುಗಿ ಹಾರಿಹೋಗಲು ನೋಡಿದಾಗ, ಖಡ್ಗವರ್ಮನು ಅವನ ಭುಜಹಿಡಿದು ಕೋಣೆಯ ನಡುವಿಗೆ ಬೀಸಿ ಒಗೆದನು,

"ಇನ್ನು ನಮ್ಮ ಆಟವೇ ಹೊರತು ನಿಮ್ಮ ಆಟ ಸಾಗದು. ನಿಜ ಹೇಳಿರಿ. ಇಲ್ಲದಿದ್ದರೆ ನಿಮ್ಮಿಬ್ಬರ ತಲೆಗಳನ್ನೂ ಚೆಂಡಾಡಿ ಬಿಡುತ್ತೇವೆ. ಆ ವಿಘ್ನೇಶ್ವರ ಪೂಜಾರಿಯೊಂದಿಗೆ ಇಲ್ಲಿದ್ದವರೆಲ್ಲರೂ ಹೋಗಿರು ವರೆಂಬುದನ್ನು ನಾವು ನಂಬಲಾರೆವು. ಇಲ್ಲೆಲ್ಲಿ ಯಾದರೂ ಸ್ವಲ್ಪ ಜನ ಕಾವಲಾಗಿರುವರೋ ಇಲ್ಲವೋ ?" ಎಂದು ಕೇಳಿದ ಜೀವದತ್ತ.

ಖಡ್ಗವರ್ಮ ಕತ್ತಿಯನ್ನೆತ್ತಿ ಅವರ ತಲೆಗಳನ್ನು ಹಾರಿಸಲು ತಯಾರಾದವನಂತೆ ನಿಂತನು. ಇದನ್ನೆಲ್ಲಾ ನೋಡಿ ಇಬ್ಬರೂ ಗಡಗಡನೆ ನಡುಗಿದರು. "ಅಯ್ಯಯ್ಯಾ ! ನಮ್ಮನ್ನು ಕೊಲ್ಲಬೇಡಿ. ನಿಜವೇ ಹೇಳುತ್ತೇವೆ. ನಮ್ಮವರೆಲ್ಲರೂ ಪೂಜಾರಿ ಪ್ರಭುಗಳ ಹಿಂದೆ ಆನಂದಪುರದ ಕಡೆಗೆ ಹೋಗಿದ್ದಾರೆ. ನಿಮಗೆ ಕಾವಲಾಗಿ ನಮ್ಮಿಬ್ಬರನ್ನು ಮಾತ್ರವೇ ಬಿಟ್ಟಿದ್ದಾರೆ. ಸತ್ಯ, ಸತ್ಯ. ಬೇಕಾದರೆ ನಾವು ಗಟ್ಟಿಯಾಗಿ ಅರಚಿ ತೋರಿಸುತ್ತೇವೆ. ಯಾರೂ ಬರುವವರಿಲ್ಲ" ಎಂದರು.

"ಹಾಗಾದರೆ ನೀವಿಬ್ಬರೂ ಒಂದುಗಂಟೆ ಹೊತ್ತು ಈ ಕೋಣೆಯಲ್ಲೇ ಇರಬೇಕು. ನಾವು ಅಷ್ಟರೊಳಗೆ ಹಿಂದಿರುಗಿ ಬಂದು ನಿಮ್ಮನ್ನು ಹೊರಗೆ ಕಳುಹಿಸು ತ್ತೇವೆ" ಎಂದ ಜೀವದತ್ತ.

ಆಟವಿಕರು ಬದುಕಿದೆಯಾ ಬಡಜೀವವೇ ಎಂಬಂತೆ ಮಿತ್ರರಿಬ್ಬರಿಗೂ ಕೈಜೋಡಿಸಿ ನಮಸ್ಕರಿಸಿದರು. ತರುವಾಯ ಖಡ್ಗವರ್ಮ ಜೀವದತ್ತರು ಆ ಕೋಣೆ ಯಿಂದ ಹೊರಗೆ ಹೋಗಿ ಬಾಗಿಲಿನ ರಂಧ್ರಕ್ಕೆ ಚಪ್ಪಡಿ ಕಲ್ಲನ್ನು ಅಡ್ಡವಿಟ್ಟರು.

ಆಮೇಲೆ ಅವರು ಮೆಟ್ಟಿಲಿನ ಮೂಲಕ ಸ್ವಲ್ಪ ದೂರ ನಡೆದು, ಒಂದು ಗುಹೆಯೊಳಗೆ ಹೋಗಿ ತಲಪಿದರು. ಆ ಕತ್ತಲೆಯ ಗುಹೆಯೊಳಗೆ ಏನೇನೋ ಸಾಮಾನುಗಳು ಕಾಲಿಗೆ ತಾಗಲು, ಮೆಲ್ಲ ನಡೆದು ಅಲ್ಲಿರುವ ಅನೇಕ ಮೆಟ್ಟಿಲುಗಳನ್ನೇರುತ್ತಾ ಗುಡ್ಡದ ಮೇಲು ಭಾಗವನ್ನು ಮುಟ್ಟಿದರು.—(ಇನ್ನೂ ಇದೆ)





# ಸನ್ಯಾಸಿಯ ಹೆಂಡತಿ

ಪಟ್ಟು ತಪ್ಪಿದುದನ್ನು ಮತ್ತೆ ಹಿಡಿದು ತರಲು ತ್ರಿವಿಕ್ರಮನು ಮರದಬಳಿಗೆ ಹೋಗಿ ಕೊಂಬೆಯ್ಮೇಲಿನಿಂದ ಶವವನ್ನು ಕೆಳಕ್ಕಿಳಿಸಿ ಭುಜದ ಮೇಲೆ ಹಾಕಿಕೊಂಡು ಮೌನವಾಗಿ ಶ್ಮಶಾನದ ಕಡೆಗೆ ಸಾಗಿದನು. ಆಗ ಎಂದಿನಂತೆ ಶವದೊಳಗೆ ಆವೇಶಿತವಾಗಿದ್ದ ಬೇತಾಳವು ಮಾತಾಡಲು ತೊಡಗಿ, "ರಾಜಾ ನೀನು ಹೀಗೆ ಕಷ್ಟಕ್ಕೆ ಗುರಿಯಾಗಿ ತಿರುಗುವುದನ್ನು ನೋಡಿದರೆ, ನಿನ್ನ ವಿಶ್ವಾಸವು ಸವೆದು ಹೋಗಿ ಕ್ರಮೇಣ ನಿನ್ನ ಮನಸು ಚಂಚಲವಾದೀತೆಂದು ನನಗೆ ಕಾಣುತ್ತದೆ. ಇದಕ್ಕೆ ಉದಾಹರಣೆಯಾಗಿ ಕಷ್ಟಗಳನ್ನು ಅನುಭವಿಸಿ ಮನಸ್ಸಿನ ಚಾಂಚಲ್ಯಕ್ಕೆ ಒಳಗಾದ ಕನಕಭದ್ರನ ಕಥೆಯನ್ನು ಹೇಳುತ್ತೇನೆ, ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಕಥೆಯನ್ನು ಪ್ರಾರಂಭ ಮಾಡಿತು :

ಹಿಂದೆ ಮಾಹೇಶ್ವರವೆಂಬ ಒಂದು ಗ್ರಾಮದಲ್ಲಿ ಸಾಮಾನ್ಯ ವ್ಯವಸಾಯದಾರನೊಬ್ಬನಿದ್ದ. ಅವನಿಗಿರುವುದೆಲ್ಲ ಚಿಕ್ಕದೊಂದು ಹೊಲವೇ ಆದರೂ ಅದರಲ್ಲಿಯೇ ಜಾಣತನದಿಂದಲೂ, ಎಚ್ಚರಿಕೆಯಿಂದಲೂ, ಆಲಸ್ಯಬಿಟ್ಟು ಕೆಲಸಮಾಡಿ, ಒಳ್ಳೆಯ ಫಲಿತವನ್ನು

ಬೇತಾಳಕಥೆಗಳು!



ಪಡೆದು ಕುಟುಂಬವು ಸುಖವಾಗಿ ಜೀವಿಸುವಂತೆ ನೋಡಿಕೊಳ್ಳುತ್ತಿದ್ದ. ಆದರೂ ಮಕ್ಕಳಿಲ್ಲದ ಚಿಂತೆಯೊಂದಿತ್ತು. ಬಹಳಕಾಲ ಮಕ್ಕಳಿಲ್ಲದ ಮೇಲೆ, ನಡುವಯಸ್ಸು ಬಂದಾಗ ಅವನಿಗೆ ಒಬ್ಬ ಮಗ ಹುಟ್ಟಿದ. ಆ ಮಗನಿಗೆ ಕನಕಭದ್ರನೆಂದು ಹೆಸರಿಟ್ಟು ತಂದೆ ತಾಯಿಗಳು ಬಹಳ ಪ್ರೀತಿಯಿಂದ ಅವನಿಗೆ ಯಾವ ಕೊರತೆಯೂ ಬಾರದಂತೆ ನೋಡಿಕೊಳ್ಳುತ್ತ ಬೆಳೆಯಿಸ ತೊಡಗಿದರು. ಕ್ರಮೇಣ ಕನಕಭದ್ರನಿಗೆ ತಾರುಣ್ಯವು ಪ್ರಾಪ್ತವಾಯಿತು.

ಆಗ ಒಂದುದಿನ ತಂದೆ ಅವನನ್ನು ಕುರಿತು, "ಅಪ್ಪಾ, ಇನ್ನು ನೀನು ಮದುವೆ ಮಾಡಿಕೊಂಡು ಗೃಹಸ್ಥ ಜೀವನಕ್ಕೆ ಕಾಲಿಡಬೇಕು. ಇದೀಗ ನಿನಗೆ ಸರಿಯಾದ ಪ್ರಾಯ. ಇನ್ನೂ ತಡವಾಗಿ ಮದುವೆಯಾಗುವುದು ಅಷ್ಟೇನೂ ಒಳ್ಳೆಯದಲ್ಲ. ನಾನೂ ನಿನ್ನ ತಾಯಿಯೂ ಮುದುಕರಾಗಲು ತೊಡಗಿದ್ದೇವೆ. ನಮ್ಮ ಕುಲದ ಬೆಳಕಾಗಿ ನೀನೊಬ್ಬನೇ ಹುಟ್ಟಿರುವೆ. ಇನ್ನು ನಿನ್ನ ಹೊಟ್ಟೆಯಿಂದ ಮಕ್ಕಳು ಹುಟ್ಟಿದ ಮರಿ ಮಕ್ಕಳನ್ನು ನೋಡಿ ನಾವು ಸಂತೋಷ ಪಡ ತ್ತೇವೆ" ಎಂದನು.

ಆದರೆ ಕನಕಭದ್ರನ ವಿಚಾರ ಬೇರೆಯಾಗಿತ್ತು ಅವನಿಗೆ ತಂದೆಯ ಮಾತು ಸ್ವಲ್ಪವೂ ರುಚಿಸಲಿಲ್ಲ "ನನಗೆ ಸಂಸಾರದ ಮೇಲೆ ಆಶೆ ಇಲ್ಲವಪ್ಪಾ. ನಾನ ಸನ್ಯಾಸಿಗಳೊಂದಿಗೆ ಸೇರಿ, ಉತ್ತಮ ಲೋಕಗಳ ದಾರಿ ತಿಳಿದುಕೊಳ್ಳಬೇಕೆಂದಿದ್ದೇನೆ. ಆದಕ್ಕೆ ತ ಸಾಧನೆಗೆ ತೊಡಗುತ್ತೇನೆ. ನನ್ನನ್ನು ನನ್ನ ಪಾಡಿ ಬಿಟ್ಟುಬಿಡಿ" ಎಂದನು ಕನಕಭದ್ರ.

ಮುದುಕನಾದ ಮೇಲೆ ಬರಬೇಕಾದ ಬು ಯೌವನದಲ್ಲೇ ತಮ್ಮ ಮಗನಿಗೆ ಬಂದುದನ್ನು ನೋ ತಂದೆ ತಾಯಿಗಳಿಗೆ ವಿಚಿತ್ರವೆನಿಸಿತು. ಅವರು ಕನ ಭದ್ರನಿಗೆ ಮದುವೆ ಮಾಡಿಕೊಳ್ಳುವಂತೆ ದಿನಾ ಹೇ ತೊಡಗಿದರು. ಮನೆಯಲ್ಲಿರುವ ಈ ಪಲ್ಲವಿಯನ ಕೇಳಲು ಸಾಧ್ಯವಾಗದೆ, ಕನಕಭದ್ರನು ಮನೆ ಬಿಟ ಕಾಶಿಗೆ ಹೊರಟುಹೋದನು.

ಕಾಶಿಯಲ್ಲಿ ಪ್ರಸಿದ್ಧನಾದ ಒಬ್ಬ ಸನ್ಯಾಸಿ ಇದ್ದನ ಕನಕಭದ್ರನು ಅವನ ಬಳಿಗೆ ಹೋಗಿ ತನ್ನ ಉದ್ದೇ ವನ್ನು ತಿಳಿಸಿ, ಅವನಿಂದ ಸನ್ಯಾಸವನ್ನು ಪಡೆದ ಕೊಂಡು, ತತ್ವೋಪದೇಶ ಮಾಡಿಸಿಕೊಂಡು ಅಲ್ಲಿಯೆ ಅವನ ಶಿಷ್ಯನಾಗಿದ್ದನು.

ಕೆಲವು ವರ್ಷಗಳು ಕಳೆದುವು. ಮಾಹೇಶ್ವರದಿಂ ಬಂದಿದ್ದ ಕೆಲಮಂದಿ ಯಾತ್ರಿಕರು, ಕಾಶಿಯಲ್ಲಿರು ಕನಕಭದ್ರನನ್ನು ನೋಡಿ, ಕೆಲವು ತಿಂಗಳ ಕೆಳಗೆ ಅವ ತಂದೆ ಹಾಸಿಗೆ ಹಿಡಿದು ತೀರಿಹೋದರೆಂಬ ಸಮ ಚಾರವನ್ನು ಹೇಳಿದರು.

ಈ ಸಮಾಚಾರವನ್ನು ಕೇಳಿದಕೂಡಲೇ ಒಬ್ಬಂ ಗಳಾದ ತನ್ನ ತಾಯಿ ಹೇಗಿರುವಳೋ, ಆಕೆಯ ಗ ಏನಾಗಿದೆಯೋ ಎಂಬ ಯೋಚನೆಯಿಂದ ಕನ ಭದ್ರನು ಚಿಂತಿಸ ತೊಡಗಿದನು. ಈ ಚಿಂತೆಯ ಸಂಕ

ವನ್ನು ತಾಳಲಾರದೆ ಅವನು ತನ್ನ ಗುರುವಿನೊಂದಿಗೆ, "ಸ್ವಾಮಿ, ನಾನು ಒಂದುಸಾರಿ ನಮ್ಮ ಊರಿಗೆ ಹೋಗಿ ತಾಯಿ ಹೇಗಿರುವಳೋ ಎಂದು ನೋಡಿ ಬರುತ್ತೇನೆ. ನನ್ನ ತಂದೆ ತೀರಿಹೋದರೆಂದು ಸುದ್ದಿ ಬಂದಿದೆ. ಸನ್ಯಾಸ ಪಡೆದುಕೊಂಡ ಮೇಲೆ ತಾಯಿ ಯನ್ನು ನೋಡಲೇ ಇಲ್ಲ. ಆದ್ದರಿಂದ ಅನುಮತಿ ಕೊಡಬೇಕು" ಎಂದನು.

"ಹುಚ್ಚನೆ? ಸನ್ಯಾಸಿಗೆ ತಂದೆ ಯಾರು, ತಾಯಿ ಯಾರು? ಎಲ್ಲವೂ ಬರೀ ಭ್ರಮ. ನೀನು ನಿಜವಾದ ಸನ್ಯಾಸಿಯಾಗಿರಲು ಸಾಧನೆ ಮಾಡು" ಎಂದು ದೊಡ್ಡ ಸನ್ಯಾಸಿ ಚುಚ್ಚಿ ಹೇಳಿದನು.

"ಹಾಗಲ್ಲ ಸ್ವಾಮಿ. ನನ್ನ ತಂದೆಗೆ ನಾನೊಬ್ಬನೇ ಮಗ. ತಂದೆ ಉಳಿಸಿರುವ ಧನವೇನಾದರೂ ಇದ್ದರೆ ಅದನ್ನು ತಂದು ನಮ್ಮ ಮಠಕ್ಕೆ ವಿನಿಯೋಗಿಸು ತ್ತೇನೆ", ಎಂದು ಕನಕಭದ್ರನು ಹೇಳಲು, ದೊಡ್ಡ ಸನ್ಯಾಸಿ "ಹಾಗಾದರೆ ಒಳ್ಳೆಯದೇ, ಹೋಗಿಬಾ" ಎಂದು ಅಪ್ಪಣೆ ಕೊಟ್ಟ.

ಕನಕಭದ್ರನು ತನ್ನ ಹುಟ್ಟೂರಿಗೆ ಹೊರಟ. ದಾರಿ ಯಲ್ಲಿ ಮಹೇಶ್ವರದ ಕಡೆಗೆ ಹೋಗುತಿರುವ ಒಂದು ಪ್ರಯಾಣಿಕರ ಗುಂಪು ಅವನಿಗೆ ಸಿಕ್ಕಿತು. ಅವನು ಅವರೊಂದಿಗೆ ಕೂಡಿ ಪ್ರಯಾಣ ಸಾಗಿಸಿದನು.

ಪ್ರಯಾಣ ಕಾಲದಲ್ಲಿ ನಾಲ್ಕು ಮಜಿಲುಗಳು ಕಳೆದುವು. ಆಮೇಲೆ ದಾರಿಯಲ್ಲಿ ಈ ಪ್ರಯಾಣಿಕರ ಮೇಲೆ ದರೋಡೆಗಾರರು ಬಿದ್ದರು. ಕೆಲವರು ಕಳ್ಳರ ಕೈಗೆ ಸಿಕ್ಕಿಬಿದ್ದು ಸತ್ತರು. ಕೆಲವರು ಓಡಿಹೋದರು. ಉಳಿದವರನ್ನು ದರೋಡೆಗಾರರು ಹಿಡಿದುಕೊಂಡು ಗುಲಾಮರ ಲೆಕ್ಕದಲ್ಲಿ ತಮ್ಮೊಳಗೆ ಹಂಚಿಕೊಂಡರು. ಕನಕಭದ್ರನೂ ಪಾರ್ವತಿ ಎಂಬ ಯುವತಿಯೂ ಒಬ್ಬ ಕಳ್ಳನ ಪಾಲಿಗೆ ಹೋದರು. ಆ ಕಳ್ಳ ಅವರಿಬ್ಬರನ್ನೂ ಕರೆದುಕೊಂಡು ಹೋಗಿ, ಗಂಗಾ ತೀರದಲ್ಲಿದ್ದ ತನ್ನ ಮನೆಗೆ ಸೇರಿಸಿ, ಅವರಿಂದ ತನ್ನ ಮನೆಯ ಕೆಲಸ ಗಳನ್ನು ಮಾಡಿಸಿಕೊಳ್ಳಲು ತೊಡಗಿದನು.

ಕಳ್ಳನಿಗೆ ಕೆಲವು ದನಗಳೂ ಇದ್ದುವು. ಅವುಗಳನ್ನು ನೋಡಿಕೊಂಡು ಪೋಷಿಸುವ ಕೆಲಸ ಕನಕಭದ್ರನದು.





ಪಾರ್ವತಿ ಕಳ್ಳನ ಮನೆಯೊಳಗೆ ಎಲ್ಲಾ ಕೆಲಸಗಳನ್ನೂ ಮಾಡಬೇಕಾಗಿತ್ತು. ಅವರಿಬ್ಬರೂ ಸಂಬಳವಿಲ್ಲದ ಗುಲಾಮರು. ಇವರಿಬ್ಬರನ್ನು ಗಂಡ ಹೆಂಡಿರನ್ನಾಗಿ ಮಾಡಿಬಿಟ್ಟರೆ ಇವರಿಗೆ ಹುಟ್ಟುವ ಸಂತಾನದಿಂದ ಗುಲಾಮರ ಸಂಖ್ಯೆ ಹೆಚ್ಚುವುದೆಂಬ ಆಸೆ ಕಳ್ಳನಿಗುಂಟಾಯಿತು. ಅವನು ಅವರಿಬ್ಬರಿಗಾಗಿ ಒಂದು ಕುಟೀರವನ್ನು ಕಟ್ಟಿಸಿ, "ಇದುವರೆಗೆ ನೀವಿಬ್ಬರು ಏನಾಗಿದ್ದೀರೋ ನನಗೆ ಗೊತ್ತಿಲ್ಲ; ಇಂದಿನಿಂದ ನೀವು ಗಂಡ ಹೆಂಡಿರು. ಈ ಕುಟೀರದಲ್ಲಿ ನಿಮ್ಮ ಸಂಸಾರ ಏರ್ಪಡಿಸಿಕೊಂಡಿರಿ" ಎಂದು ಪಾರ್ವತೀ ಕನಕಭದ್ರರೊಂದಿಗೆ ಹೇಳಿದನು.

ಇಬ್ಬರೂ ಆ ಕುಟೀರದೊಳಗೆ ಹೋದರು. ಆದರೆ ಪಾರ್ವತಿ ತುಂಬಾ ಹೆದರಿದಳು. ಆಗ ಕನಕಭದ್ರನು ಅವಳನ್ನು ಕುರಿತು, "ಏನೂ ಹೆದರಬೇಡ. ನಾನು ಎಲ್ಲಾ ಬಂಧನಗಳನ್ನೂ ಬಿಟ್ಟಿರುವ ಸನ್ಯಾಸಿ. ಆದುದರಿಂದ ನನ್ನಿಂದ ನಿನಗೆ ಯಾವ ಭಯವೂ ಉಂಟಾಗದು. ನಾವು ನಮ್ಮ ಯಜಮಾನ ಮಾತನ್ನು ಮೀರುವುದು ಒಳ್ಳೆಯದಲ್ಲ. ಆದುದರಿಂ ಅವನ ದೃಷ್ಟಿಗೆ ನಾವು ಗಂಡಾಹೆಂಡಿರಂತೆ ನಟಿಸುತ ಪವಿತ್ರವಾದ ಬ್ರಹ್ಮಚರ್ಯದಿಂದ ಜೀವನವನ ಕಳೆಯೋಣ" ಎಂದನು.

ಅವನ ಮಾತನ್ನು ಕೇಳಿ ಪಾರ್ವತಿಗೆ ಧೈರ್ಯ ಬಂದುದು ಮಾತ್ರವಲ್ಲದೆ ಅವನ ಮೇಲೆ ಭ ಕೂಡಾ ಉಂಟಾಯಿತು. ಈ ಗುಲಾಮ ಬಾಳು ಯಲ್ಲಿ ಒಬ್ಬರಿಗೊಬ್ಬರು ಸಹಾಯಕರಾಗಿರುತ್ತ ಒಬ್ಬರ ಕಷ್ಟಸುಖಗಳನ್ನು ಒಬ್ಬರೊಂದಿಗೆ ಹೇ ಕೊಳ್ಳುತ್ತ, ರಾತ್ರಿಯ ಹೊತ್ತಿನಲ್ಲಿ ಪುರಾಣ ಕ ಗಳನ್ನು ಕುರಿತು ಹೇಳುತ್ತ ಕೇಳುತ್ತ, ತತ್ವವಿಚಾ ಮಾಡುತ್ತ ಸುಖವಾಗಿಯೇ ಕಾಲ ಕಳೆಯುತ್ತಿದ್ದರು.

ಹೀಗಿರಲು ಅವರ ಯಜಮಾನನಾದ ಕಳ್ಳ ಅವ ಕೆಲಸಗಳಿಂದ ತೃಪ್ತನಾಗಿ ಅವರಿಗೆ ಬಹಳ ಮಟ್ಟಿ ಸ್ವೇಚ್ಛೆಯನ್ನೂ ಕೊಟ್ಟನು. ಆದರೆ ಕನಕಭದ್ರ ಮನಸ್ಸಿನಲ್ಲಿ ಏನೋ ಬದಲಾವಣೆಯಾಗ ತೊಡಗಿತು ಅವನು ತನ್ನೊಳಗೆ ಈ ರೀತಿಯಾಗಿ ಅಂದ ಕೊಂಡನು : "ನಾನು ಸರ್ವಸಂಗ ಪರಿತ್ಯಾಗಿಯಾ ವನು. ನನಗೆ ಗುಲಾಮ ತನವೂ ಸ್ವೇಚ್ಛೆಯು ಸ್ವಾತಂತ್ರ್ಯವೂ ಎಲ್ಲಾ ಒಂದೇ. ಆದರೆ ಪಾರ್ವ ಹಾಗಿಲ್ಲ. ಬಹಳ ಒಳ್ಳೆಯ ಗುಣವುಳ್ಳವಳು ; ಕುಲೀನ ಇಂಥವಳು ತಕ್ಕ ವರನನ್ನು ಮದುವೆಯಾಗಿ ಸುಖ ವಾಗಿ ಜೀವಿಸಬೇಕಾಗಿದ್ದ ಕಾಲದಲ್ಲಿ, ಒಬ್ಬ ಕಳ್ಳ ಮನೆಯಲ್ಲಿ ಗುಲಾಮಳಾಗಿರುವುದು ಉಚಿತವಲ್ಲ ಬಾಯಿಬಿಟ್ಟು ಅವಳೇನೂ ಹೇಳದೆ ಹೋದರೂ ಈ ಕಳ್ಳನ ಕೈಯೊಳಗಿಂದ ಪಾರಾಗಲು ಅವಳ ಮನಸ್ಸು ತುಡಿಸುತ್ತಿದ್ದೀತು. ಅವಳಿಗೆ ಸ್ವೇಚ್ಛೆಸಿಗುವ ದಾ ಯಾವುದೋ ?"

ಅವಳೊಂದಿಗೆ ತಾನೂ ತಪ್ಪಿಸಿಕೊಂಡು ಹೋಗುವ ದೊಂದೇ ದಾರಿಯು ಹೊರತು, ಎಷ್ಟು ಆಲೋಚಿ

ದರೂ ಬೇರೆ ದಾರಿ ಕನಕಭದ್ರನಿಗೆ ತೋರಲಿಲ್ಲ. ಅವನು ಒಂದುದಿನ ರಾತ್ರಿ ಪಾರ್ವತಿಯೊಂದಿಗೆ ಅದೇ ಮಾತನ್ನು ಹೇಳಿದನು.

"ಅದೇನೋ ನಿಜವೇ. ನನಗೆ ಈ ಕಳ್ಳನ ಕೈಕೆಳಗೆ ಬದುಕುವ ಬಾಳು ಅಸಹ್ಯವಾಗಿಯೇ ಇದೆ. ಆದರೆ ಹೆಣ್ಣಾಗಿರುವ ನನ್ನಿಂದ ಬೇರೇನು ಮಾಡಲಾದೀತು? ಬೇಕಾದರೆ ನೀವು ತಪ್ಪಿಸಿಕೊಂಡು ಹೋಗಿ ಸ್ವೇಚ್ಛೆಯಾಗಿ ಜೀವಿಸಿರಿ. ನನ್ನನ್ನು ಕೂಡಾ ನೀವು ಕರೆದುಕೊಂಡು ಹೋದರೆ, ನಿಮ್ಮ ಕೊರಳಿಗೆ ನಾನೊಬ್ಬಳು ಬಂಡೆಗಲ್ಲಿನ ಹಾಗೆ ಆದೇನು. ಆ ಕಷ್ಟ ನಿಮಗೆ ಬೇಡ" ಎಂದಳು ಪಾರ್ವತಿ.

"ನಾನು ತಪ್ಪಿಸಿಕೊಂಡು ಹೋಗ ಬೇಕೆಂದುದು ನಿನಗಾಗಿಯೇ. ಆದುದರಿಂದ ನಾನೊಬ್ಬನೇ ಓಡಿಹೋಗುವ ಸಮಸ್ಯೆಯೇ ಇಲ್ಲ" ಎಂದ ಕನಕಭದ್ರ.

"ಹಾಗಾದರೆ ಓಡಿಹೋಗೋಣ. ಅದಕ್ಕೆತಕ್ಕ ಉಪಾಯವೇನಾದರೂ ಆಲೋಚನೆ ಮಾಡಿರಿ. ಆ ಪ್ರಯತ್ನದಲ್ಲಿ ನನ್ನ ಪ್ರಾಣ ಹೋದರೂ ನನಗೇನೂ ಚಿಂತೆಯಿಲ್ಲ" ಎಂದಳು ಪಾರ್ವತಿ.

ರಾತ್ರಿಯಲ್ಲಿ ಅವರಿಬ್ಬರನ್ನು ಕುರಿತು ಕಳ್ಳನ ಕಡೆಯವರಾರೂ ಕಾವಲು ಕಾಯುತ್ತಿದ್ದಿಲ್ಲ. ನದಿ ಸಮೀಪದಲ್ಲಿರುವುದರಿಂದ ತಪ್ಪಿಸಿಕೊಂಡು ಹೋಗುವುದೇನೂ ಅಷ್ಟುಕಷ್ಟದ ಕೆಲಸವಲ್ಲ. ಅಂತೆಯೇ ಒಂದುದಿನ ರಾತ್ರಿ ಪಾರ್ವತಿ ತನಗೂ ಸನ್ಯಾಸಿಗೂ ನಾಲ್ಕುದಿನಗಳಿಗೆ ಸಾಕಾಗುವಷ್ಟು ಭೋಜನ ಪದಾರ್ಥಗಳನ್ನು ತಯಾರಿಸಿಕೊಂಡಳು. ಅದನ್ನು ಗಂಟು ಕಟ್ಟಿಕೊಂಡು ಇಬ್ಬರೂ ಎರಡು ದನಗಳನ್ನೂ ತಮ್ಮೊಂದಿಗೆ ತೆಗೆದುಕೊಂಡು ನದಿಯುಬದಿಗೆ ಹೋದರು. ದನಗಳ ಸಹಾಯದಿಂದ ನದಿಯನ್ನು ದಾಟಿ, ಆಮೇಲೆ ಕಾಲುನಡಿಗೆಯಿಂದ ಎಡೆಬಿಡದೆ ನಡೆದು ಬೆಳಗಾಗುವಾಗ ಒಂದು ನಗರವನ್ನು ತಲಪಿದರು. ಅಲ್ಲಿನವರೊಂದಿಗೆ ಕನಕಭದ್ರನು ಪಾರ್ವತಿಯನ್ನು ತನ್ನ ಹೆಂಡತಿ



ಎಂದು ಹೇಳಿ ಆದಿನ ರಾತ್ರಿಯವರೆಗೆ ಒಂದು ಸತ್ರದಲ್ಲಿ ತಂಗಿದನು. ಅವನು ಪಾರ್ವತಿಯನ್ನು ಕರೆದುಕೊಂಡು ಹೋಗಿ ಅವಳ ಊರಿನಲ್ಲಿ ಬಿಡುವ ಆಲೋಚನೆ ಮಾಡಿದಾಗ, 'ಪಾರ್ವತಿಗೆ ಅವಳ ಗ್ರಾಮದ ಹೆಸರು ಗೊತ್ತಿತ್ತೇ ಹೊರತು ಅದು ಯಾವ ದಿಕ್ಕಿನಲ್ಲಿರುವುದೆಂದು ಗೊತ್ತಿರಲಿಲ್ಲ. ಆ ಪುಟ್ಟ ಗ್ರಾಮದ ಹೆಸರು ತಿಳಿದವರೂ ಅಲ್ಲಿಲ್ಲ.

"ಒಂದುವೇಳೆ ನಾನೀಗ ನನ್ನ ಮನೆಗೆ ತಿರುಗಿ ಹೋದರೂ ಯಾರೂ ನನ್ನನ್ನು ಸೇರಿಸಿಕೊಳ್ಳಲಾರರು. ನಾನು ಬದುಕಿರುವಷ್ಟುಕಾಲವೂ ಆ ಕಳ್ಳರ ಗುಲಾಮತನದಲ್ಲೇ ಇರುವುದೆಂದು ಸಮಾಧಾನ ಮಾಡಿಕೊಂಡವಳು. ಆದ್ದರಿಂದ ನಿಮಗೆ ಅಭ್ಯಂತರವಿಲ್ಲದಿದ್ದರೆ ನಿಮ್ಮ ಮನೆಯಲ್ಲಿಯೇ ಚಾಕರಿ ಮಾಡುತ್ತಾ ಬದುಕಿಕೊಂಡಿರುತ್ತೇನೆ. ನಿಮ್ಮ ತಾಯಿ ಮುದುಕರಾಗಿರುವರೆಂದು ಹೇಳಿದ್ದೀರಿ. ಅವರ ಆರೈಕೆ ನೋಡಿಕೊಳ್ಳುತ್ತಾ ನನ್ನ ಜೀವನ ಕಳೆಯುತ್ತೇನೆ.

ನನಗೆ ಬೇರೆ ದಾರಿ ತೋರದು" ಎಂದಳು ಪಾರ್ವತಿ. ಕನಕಭದ್ರನು ಅವಳನ್ನು ಕರೆದುಕೊಂಡು ದಾರಿಯಲ್ಲಿ ಮಜಲು ಹಾಕುತ್ತಾ ಒಂದುದಿನ ಮಹೇಶ್ವರವನ್ನು ತಲುಪಿ ತನ್ನ ಮನೆಯನ್ನು ಸೇರಿದನು. ಅಲ್ಲಿ ತಾಯಿ ತೀರಾ ಅಸಹಾಯಕಳಾಗಿ ಬಹಳ ಕಷ್ಟಪಡುತ್ತಿದ್ದಳು. ಅವಳು ಮಗನನ್ನು ನೋಡಿ ಏನೇನೋ ಹೇಳಿಕೊಂಡು, ನೆನೆದುಕೊಂಡು ಕಣ್ಣೀರಿಳಿಸಿದಳು.

ಕನಕಭದ್ರನು ತಾಯಿಗೆ ಸಮಾಧಾನ ಮಾಡಿ, "ನೀನು ಸೊಸೆ ಬರಬೇಕೆಂದು ಬಹಳ ಒತ್ತಾಯ ಮಾಡಿದೆಯಷ್ಟೆ? ಇಕೋ ಸೊಸೆಯನ್ನು ಕರೆದುಕೊಂಡು ಬಂದಿದ್ದೇನೆ ನೋಡು" ಎಂದು ಹೇಳಿ ಪಾರ್ವತಿಯನ್ನು ತೋರಿಸಿದನು. ಪಾರ್ವತಿಯನ್ನು ನೋಡಿ ಮುದುಕಿಗೆ ತುಂಬಾ ಸಂತೋಷವಾಯಿತು.

ತರುವಾಯ ಕನಕಭದ್ರನು ಮನೆಯಲ್ಲೇ ಇದ್ದು ಪಾರ್ವತಿಯೊಂದಿಗೆ ಸಂಸಾರ ಸಾಗಿಸುತ್ತ, ತನ್ನ ಮುದಿ ತಾಯಿಯನ್ನು ಮತ್ತಷ್ಟು ಸಂತೋಷಪಡಿಸಿದನು. ಅವಳ ಆಸೆಯಂತೆ ಮೊಮ್ಮಗನೂ ಹುಟ್ಟಿದ.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ಕನಕಭದ್ರನ ವಿಚಿತ್ರ ಪ್ರವರ್ತನೆಗೆ ಅರ್ಥವೇನಾದರೂ ಇದೆಯೆ? ಅವನು ಚಿಕ್ಕವಯಸ್ಸಿನಲ್ಲಿ ಏತಕ್ಕೆ ಸನ್ಯಾಸ ತೆಗೆದುಕೊಂಡ? ವೈರಾಗ್ಯವು ಮೈಗೂಡಿದ ಮೇಲೆ ಸಂಸಾರದೊಳಗೆ ಬಂದನೇಕೆ? ಈ ಅನುಮಾನಗಳಿಗೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಹೋಗುವುದು, ಎಚ್ಚರ!" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದ: "ಕನಕಭದ್ರನ ವೈರಾಗ್ಯವು ಜೀವಿತದ ಅನುಭವದಿಂದ ಬಂದ ವೈರಾಗ್ಯವಲ್ಲ. ಅವನ ತಂದೆ ಕಷ್ಟಜೀವಿಯಾಗಿದ್ದರೆ ಅವನು ಸುಖಜೀವಿಯಾಗಿದ್ದ. ತನ್ನ ತಂದೆಯ ಹಾಗೆ ಬದುಕಲು ಇಷ್ಟವಿಲ್ಲದೆ ವೈರಾಗ್ಯ ತಂದುಕೊಂಡನು. ಆದರೆ ಅವನು ಕೂಡಾ ಕಷ್ಟಗಳನ್ನು ಅನುಭವಿಸಲು ಮೊದಲು ಮಾಡಿದಾಗ, ಜೀವಿತವು ಅವನಿಗೆ ಸಮೀಪವಾಯಿತು. ಅವನಿಗೆ ತಾಯಿಯ ಮೇಲೆ ಮಮಕಾರವೂ ಸಹಜವಾಗೇ ಕೆರಳಿತು. ಆದರೆ ಪಾರ್ವತಿಯನ್ನು ಕುರಿತು ಅನುಭವದಿಂದ ಅವನಲ್ಲಿ ಆಂದೋಳನೆ ಎದ್ದಿತು. ಒಬ್ಬಳು ಸ್ತ್ರೀ ಒಬ್ಬ ಗಂಡುಸಿನ ಜೀವನದಲ್ಲಿ ಬಹಳ ಕಾಲ ಭಾಗ ಹಂಚಿಕೊಳ್ಳುತ್ತಿದ್ದರೆ ಅವರಿಬ್ಬರ ನಡುವೆ ದಾಂಪತ್ಯ ಸಂಬಂಧವು ಸ್ವಾಭಾವಿಕವಾಗಿ ಏರ್ಪಡುತ್ತದೆ. ಕನಕಭದ್ರನು ಮನೆಯನ್ನು ತಲುಪುವಾಗ ಅವನಲ್ಲಿ ವೈರಾಗ್ಯದ ಪಸೆ ಸ್ವಲ್ಪವೂ ಉಳಿದಿರಲಿಲ್ಲ. ಆದುದರಿಂದ ಅವನು ತನ್ನಂತಾನೆ ಸಂಸಾರದಲ್ಲಿ ಬಿದ್ದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೆ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ಜಂಟಿಪಂಡಿತರು

ಅನೇಕವರ್ಷಗಳ ಹಿಂದೆ ಅವಂತೀ ನಗರದ ಆಸ್ಥಾನದಲ್ಲಿ ಹರನಾಥಶಾಸ್ತ್ರಿ ಗುರುನಾಥಶಾಸ್ತ್ರಿ ಎಂಬ ಇಬ್ಬರು ಜಂಟಿ ಪಂಡಿತರಿದ್ದರು. ಅಲ್ಲಿಯ ಆಸ್ಥಾನದಲ್ಲಿ ಅವರಿಗಿಂತ ಉದ್ದಾಮ ಪಂಡಿತರು ಬೇರೆ ಯಾರೂ ಇರಲಿಲ್ಲ. ಆದುದರಿಂದ ತಮ್ಮಂತಹ ಬುದ್ಧಿವಂತರು ಬೇರೆಲ್ಲಿಯೂ ಇಲ್ಲವೆಂದು ಅವರಿಗೆ ಗರ್ವವು ಹತ್ತಿಕೊಂಡಿತ್ತು. ಅವರು ಯಾವಾಗಲೂ ಬೇರೆಯವರನ್ನು ಹಂಗಿಸುತ್ತ, ಅವಹೇಳನೆ ಮಾಡುತ್ತ ಅವಮಾನಿಸುತ್ತ ಇರುತ್ತಾರೆ.

ಕಳಿಂಗಪುರದ ಆಸ್ಥಾನದಲ್ಲಿಯೂ ಒಬ್ಬ ವಿದ್ವಾಂಸನಿದ್ದ. ಸುಗುಣಶರ್ಮ ಪಂಡಿತನೆಂದು ಅವನ ಹೆಸರು ಅವನ ಪಾಂಡಿತ್ಯವೂ ಬುದ್ಧಿವಂತಿಕೆಯೂ ಅಪಾರವಾಗಿತ್ತು. ಅವನ ಖ್ಯಾತಿ ಇತರ ದೇಶಗಳಿಗೂ ಹರಡಿಕೊಂಡು ಹೋಗುತಿತ್ತು.

ಸುಗುಣಶರ್ಮ ಪಂಡಿತನ ಖ್ಯಾತಿ ದಿನೇದಿನೇ ಹೆಚ್ಚಾಗುತ್ತಾ ಬರುವುದನ್ನು ನೋಡಿ ಅವಂತಿಯ ಜಂಟಿ ಪಂಡಿತರಿಗೆ ಸಹಿಸಲಾಗಲಿಲ್ಲ. ತಮ್ಮ ಖ್ಯಾತಿಯನ್ನು ಬೆಳೆಯಿಸಬೇಕಾದರೆ ಸುಗುಣಶರ್ಮನನ್ನು ಸೋಲಿಸಿ ಅವಮಾನಿಸಬೇಕೆಂದು ಅವರು ನಿಶ್ಚಯಿಸಿಕೊಂಡರು. ಅದು ತಮ್ಮಿಂದ ಸಾಧ್ಯವೆಂದು ನಂಬಿ, ತಮ್ಮ ರಾಜನ ಅನುಮತಿ ಪಡೆದು ಕಳಿಂಗಕ್ಕೆ ಹೋದರು. ಅಲ್ಲಿಯ ರಾಜನನ್ನು ನೋಡಿ, "ಅವಂತೀ ಆಸ್ಥಾನದ ಜಂಟಿ ಪಂಡಿತರಾದ ನಾವು ಇಲ್ಲಿಯ ಸುಗುಣಶರ್ಮ ಪಂಡಿತರನ್ನು ಸೋಲಿಸಲು ಬಂದಿದ್ದೇವೆ" ಎಂದರು. ಅದನ್ನು ಕೇಳಿ ಸುಗುಣಶರ್ಮನು ರಾಜನ ಅನುಮತಿಯನ್ನು ಪಡೆದು ಅವರನ್ನು ಕುರಿತು, "ನಾನು ಪಾಂಡಿತ್ಯದಲ್ಲಿ ಅಷ್ಟೇನೂ ದೊಡ್ಡವನಲ್ಲ. ಆದರೂ ನೀವು ಬಯಸಿ ಬಂದಿರುವಿರಾದುದರಿಂದ, ನಿಮ್ಮಿಬ್ಬರನ್ನು ಬೇರೆಬೇರೆಯಾಗಿ ಒಂದು ಚಿಕ್ಕ ಪ್ರಶ್ನೆಯಿಂದ ಪರೀಕ್ಷಿಸುತ್ತೇನೆ. ಅದಕ್ಕೆ ನೀವು ಸರಿಯಾದ ಸಮಾಧಾನ ಕೊಟ್ಟರೆ ನನಗಿಂತಲೂ ನೀವು ಹೆಚ್ಚಿನವರೆಂದು ಒಪ್ಪಿಕೊಳ್ಳುತ್ತೇನೆ" ಎಂದನು.

"ಅದು ಸರಿ. ಸುಮ್ಮನೆ ವಾದವಿವಾದವೇಕೆ?" ಎಂದನು ರಾಜ. ಹರನಾಥ, ಗುರುನಾಥರೂ ಆ ಮಾತಿಗೆ ಒಪ್ಪಿದರು.

ಮರುದಿನ ಸಭೆಯಲ್ಲಿ ಪರೀಕ್ಷೆಯ ಏರ್ಪಾಡು ನಡೆಯಿತು. ಪಂಡಿತರ ಪರೀಕ್ಷೆಯಲ್ಲಿ ತಮ್ಮ ಆಸ್ಥಾನ

ಕೆ. ಟಿ. ವಿಜಯಕುಮಾರ

ಪಂಡಿತರು ಗೆಲ್ಲುವರೋ ಸೋಲುವರೋ ಎಂದು
ನೋಡಲು ರಾಜನ ಸಭೆಗೆ ಜನರು ಗುಂಪುಗುಂಪಾಗಿ
ಬಂದರು. ಸುಗುಣಶರ್ಮನು ಒಂದು ಕಲ್ಲಿಗೆ ದಾರ
ವನ್ನು ಕಟ್ಟಿ, ಅದನ್ನು ಒಂದು ಕೋಲಿಗೆ ನೇತಾಡು
ವಂತೆ ಕಟ್ಟಿದನು. ಆ ಕಲ್ಲಿಗೇ ಇನ್ನೊಂದು ದಾರ
ವನ್ನು ಕಟ್ಟಿ ಅದನ್ನು ಕೆಳಗೆ ನೇತಾಡುವಂತೆ ಬಿಟ್ಟನು.

ತರುವಾಯ ಸುಗುಣಶರ್ಮನು ಹರನಾಥ ಶಾಸ್ತ್ರಿ
ಯನ್ನು ಸಭೆಯೊಳಗೆ ಕರೆದು, ತನ್ನ ಪಕ್ಕದಲ್ಲಿ ಕೂಡಿಸಿ
ಕೊಂಡನು. ಪಕ್ಕದಲ್ಲಿ ನೇತಾಡುವ ಕಲ್ಲನ್ನು ಹರನಾಥ
ನಿಗೆ ತೋರಿಸಿ "ಈ ಕಲ್ಲಿಗೆ ಮೇಲೂ ಕೆಳಗೂ ದಾರ
ಗಳಿವೆಯಷ್ಟೆ? ನಾನೀಗ ಕೆಳಗಿನ ದಾರವನ್ನು ಹಿಡಿದು
ಎಳೆಯುತ್ತೇನೆ. ಎಳೆಯುವಾಗ ಕೆಳಗಿನ ದಾರವು
ತುಂಡಾಗುವುದೋ ಮೇಲಿನ ದಾರವು ತುಂಡಾಗು
ವುದೋ ಹೇಳಬಲ್ಲಿರಾ?" ಎಂದನು.

"ಖಂಡಿತವಾಗಿ ಮೇಲಿನ ದಾರವೇ ತುಂಡಾಗು
ತ್ತದೆ" ಎಂದು ಹರನಾಥ ಶಾಸ್ತ್ರಿ ತಟ್ಟನೆ ಹೇಳಿಬಿಟ್ಟ.
ಕೂಡಲೇ ಸುಗುಣಶರ್ಮನು ಕೆಳಗಿನ ದಾರವನ್ನು
ಹಿಡಿದು ರಭಸದಿಂದ ಎಳೆದಾಗ, ಹರನಾಥ ಹೇ
ದಂತೆ ಮೇಲಿನ ದಾರವು ತುಂಡಾಗಲಿಲ್ಲ; ಅದ
ಬದಲಾಗಿ ಕೆಳಗಿನ ದಾರವೇ ತುಂಡಾಯಿತು.

"ನೋಡಿದಿರಾ? ನೀವು ಸೋತಿರಿ. ನೀವ
ಹೋಗಿ ಗುರುನಾಥ ಶಾಸ್ತ್ರಿಗಳನ್ನು ಕಳುಹಿಸಿರಿ"
ಎಂದ ಸುಗುಣಶರ್ಮ.

ಹರನಾಥನು ಗುರುನಾಥನ ಹತ್ತಿರ ಹೋಗಿ
ನಡೆದ ಸಂಗತಿಯನ್ನು ಹೇಳಿ, "ಚೆನ್ನಾಗಿ ಆಲೋಚನೆ
ಮಾಡದೆ ಮೇಲಿನ ದಾರ ತುಂಡಾಗುವುದೆಂದು ಹೇಳಿ
ನಾನು ಸೋತೆ. ನೀನಾದರೂ ಕೆಳಗಿನದಾರ ಕಡಿಯುವ
ದೆಂದು ಹೇಳಿ ನಮ್ಮ ಮರ್ಯಾದೆ ನಿಲ್ಲಿಸು" ಎಂದು
ಪಿಸುದನಿಯಲ್ಲಿ ಹೇಳಿದನು.

ಇಷ್ಟರೊಳಗೆ ಸುಗುಣಶರ್ಮನು ತುಂಡಾದ ದಾ
ವನ್ನು ಬಿಚ್ಚಿ, ಕಲ್ಲಿಗೆ ಇನ್ನೊಂದು ದಾರವನ್ನು
ಮೊದಲಿನ ಹಾಗೆಯೇ ಕಟ್ಟಿದನು.

ಗುರುನಾಥನು ಸಭೆಯೊಳಗೆ ಬಂದು ಸುಗುಣ
ಶರ್ಮನ ಬಳಿಯಲ್ಲಿ ಕುಳಿತುಕೊಂಡನು. ಹರನಾಥ



ಹೀಗೆ ಕೇಳಿದಂತೆಯೇ ಸುಗುಣಶರ್ಮನು ಗುರುನಾಥನನ್ನೂ ಕೇಳಿದನು. "ಕೆಳಗಿನ ದಾರ ಕಡಿಯುತ್ತದೆ" ಎಂದ ಗುರುನಾಥ.

ಸುಗುಣಶರ್ಮ ತನ್ನೊಳಗೇ ನಗುತ್ತ ಕೆಳಗಿನ ದಾರವನ್ನು ಹಿಡಿದುಕೊಂಡು ಸಾವಕಾಶವಾಗಿ ಜಗ್ಗತೊಡಗಿದನು. ಸ್ವಲ್ಪ ಹೊತ್ತಿನಲ್ಲಿ ಕಲ್ಲಿನ ಮೇಲ್ಭಾಗದ ದಾರವು ತುಂಡಾಗಿ ಕಲ್ಲು ಕೆಳಗೆ ಬಿತ್ತು.

ಇದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಆಗ ಸುಗುಣಶರ್ಮನು ಗುರುನಾಥನನ್ನು ನೋಡಿ, "ಇಷ್ಟೊಂದು ಚಿಕ್ಕ ವಿಷಯದಲ್ಲಿ ನೀವಿಬ್ಬರೂ ಸೋತುಹೋದಿರಿ. ನಿಮ್ಮ ಪಾಂಡಿತ್ಯದ ಸಂಗತಿ ಯಾವುದೂ ನನಗೆ ತಿಳಿಯದು. ನೀವು ದೊಡ್ಡ ಪಂಡಿತರು ನಿಜವಾಗಿರಬಹುದು. ಆದರೆ ನಿಮಗೆ ವಿಜ್ಞಾನದ ತಿಳುವಳಿಕೆ ಕಡಮೆ. ಅದರ ಬದಲಿಗೆ ಅಹಂಕಾರವನ್ನು ಇಟ್ಟುಕೊಂಡಿದ್ದೀರಿ. ಆದುದರಿಂದಲೇ ಕರೆಯದೆಯೇ ಪರಿಚಯವಿಲ್ಲದವರ ಹತ್ತಿರ ಸ್ಪರ್ಧೆಗೆ ಬಂದಿದ್ದೀರಿ. ಇನ್ನು ಮೇಲೆ ಇಂತಹ ಕೆಲಸಕ್ಕೆ ತಲೆ ಹಾಕಿ ಅವಮಾನಿತರಾಗಬೇಡಿ" ಎಂದು ಮೆತ್ತಗೆ ನಿಂದನೋಪಚಾರ ಮಾಡಿ ಆ ಜಂಟಿಗಳನ್ನು ಕಳುಹಿಸಿಕೊಟ್ಟನು.

ಸುಗುಣಶರ್ಮನು ಒಂದೇ ರೀತಿಯ ದಾರಗಳನ್ನು ಕಟ್ಟಿ ಒಮ್ಮೆ ಕೆಳಗಿನದನ್ನೂ ಇನ್ನೊಮ್ಮೆ ಮೇಲಿನದನ್ನೂ ಹೇಗೆ ತುಂಡು ಮಾಡಿದನೆಂಬುದು ಕಳಿಂಗ ರಾಜನಿಗೂ ಗೊತ್ತಾಗಲಿಲ್ಲ. ಅದರ ರಹಸ್ಯವನ್ನು ವಿವರಿಸಿ ಹೇಳುವಂತೆ ರಾಜನು ಕುತೂಹಲದಿಂದ ಸುಗುಣ ಶರ್ಮನನ್ನು ಕೇಳಿದನು.

"ಅದೊಂದು ಚಿಕ್ಕ ಕೈಚಳಕ ಅಷ್ಟೇ. ಪ್ರತಿ ವಸ್ತುವಿಗೂ ಒಂದು ವಿಧವಾದ ಜಡತ್ವವು ಸಹಜವಾಗಿರುತ್ತದೆ. ಮೊದಲನೇಸಾರಿ ನಾನು ಕೆಳಗಿನ ದಾರವನ್ನು ರಭಸದಿಂದ ಎಳೆದೆನಷ್ಟೆ? ಕಲ್ಲನ್ನು ಹೊರುವ ದಾರಕ್ಕೆ ಆಗಲೇ ಸ್ವಲ್ಪ ಬಿಗಿತವಿದ್ದರೂ, ನಾನು ಕೆಳಗಿನ ದಾರವನ್ನು ಎಳೆದುದರಿಂದ ಅದರ ಬಿಗಿತವು ಹೆಚ್ಚುವುದರೊಳಗೇ ಕೆಳಗಿನ ದಾರವು ತುಂಡಾಯಿತು. ಎರಡನೇಸಾರಿ ಅದೇ ಕೆಳಗಿನ ದಾರವನ್ನು ಸಾವಕಾಶವಾಗಿ ಎಳೆಯುವಾಗ ಕೆಳಗಿನ ದಾರಕ್ಕೆ ತುಂಡಾಗುವಷ್ಟು ಬಿಗುವು ಬರುವುದರೊಳಗೆ ಕಲ್ಲನ್ನು ಹೊರುವ ಮೇಲಿನ ದಾರದ ಬಿಗುವು ತುಂಡಾಗುವಷ್ಟು ಹೆಚ್ಚಾಯಿತು. ಇದನ್ನು ಯಾರು ಬೇಕಾದರೂ ಮಾಡಬಹುದು. ಆ ಪಂಡಿತರು ಇದರ ಜ್ಞಾನ ಉಳ್ಳವರಾಗಿರುತ್ತಿದ್ದರೆ, ಯಾವ ದಾರ ತುಂಡಾಗುವುದೆಂಬುದು ಎಳೆಯುವವರ ಕೈಚಳಕದಲ್ಲಿದೆ ಎನ್ನುತ್ತಿದ್ದರು" ಎಂದನು ಸುಗುಣಶರ್ಮ. ರಾಜನು ಸುಗುಣಶರ್ಮನ ಯುಕ್ತಿಗೆ ಮೆಚ್ಚಿ, ಆಸ್ಥಾನದ ಮರ್ಯಾದೆ ಉಳಿಸಿದನೆಂದು ವಿಶೇಷ ಬಹುಮಾನ ಕೊಟ್ಟನು.



# ಮಿತಿಯ ಕಾರಣ

**ಸು**ಬ್ಬಯ್ಯ ಶೆಟ್ಟಿ ಆಸ್ತಿವಂತನಾಗಿದ್ದರೂ ಜಿಪುಣನಲ್ಲ; ಮಿತವ್ಯಯಿಯಾಗಿದ್ದ. ಒಂದುದಿನ ಅವನ ಹತ್ತಿರ ಸೂರಯ್ಯನೆಂಬ ರೈತನು ಬಂದು, "ಸಂಕ್ರಾಂತಿ ಹಬ್ಬಕ್ಕೆ ಒಂದು ಇಪ್ಪತ್ತೈದು ರೂಪಾಯಿ ಕೈಗಡವಾಗಿ ಕೊಡಿ" ಎಂದು ಕೇಳಿ ಪಡೆದುಕೊಂಡ.

ಆ ದಿನ ಸಾಯಂಕಾಲ ಸುಬ್ಬಯ್ಯಶೆಟ್ಟಿ ತನ್ನ ಹೆಂಡತಿಗೊಂದು ಸೀರೆ ಕೊಂಡುಕೊಳ್ಳಲಿಕ್ಕಾಗಿ ಜವುಳಿಯಂಗಡಿಗೆ ಹೋದ. ಅಲ್ಲಿ ಸೂರಯ್ಯ ಕೂಡಾ ಇಪ್ಪತ್ತೈದು ರೂಪಾಯಿಯ ಸೀರೆಯೊಂದನ್ನು ಕೊಂಡುಕೊಳ್ಳುತ್ತಿದ್ದ. ಆಗ ಸುಬ್ಬಯ್ಯ ಶೆಟ್ಟಿ, ಅಂಗಡಿಯವನ ಹತ್ತಿರ, ಹತ್ತು ಹನ್ನೆರಡು ರೂಪಾಯಿದು ಸೀರೆಗಳನ್ನು ತೋರಿಸುವಂತೆ ಕೇಳಿದ. ಆಗ ಸೂರಯ್ಯ ಸುಬ್ಬಯ್ಯ ಶೆಟ್ಟಿಯೊಡನೆ "ಇದೇನ್ರೀ ಶೆಟ್ಟಿಯವರ, ಹಣವಂತರಾದ ನೀವು ಕೂಡಾ ಇಷ್ಟು ಅಗ್ಗದ ಸೀರೆ ತೆಗೆದುಕೊಳ್ಳುವಿರಲ್ಲಾ? ಇದರ ಇಮ್ಮಡಿ ಬೆಲೆಗೆ ಒಳ್ಳೆಯ ಸೀರೆ ಕೊಂಡುಕೊಳ್ಳಬಾರದೆ?" ಎಂದು ತುಸು ಅವಹೇಳನೆಯ ಧೋರಣೆಯಲ್ಲಿ ಕೇಳಿದ.

"ಮಿತಖರ್ಚು ಅಗತ್ಯ ಸೂರಯ್ಯ. ಇಲ್ಲದಿದ್ದರೆ ಯಾರಾದರೂ ಬಂದು ಒಂದಿಪ್ಪತ್ತೈದು ರೂಪಾಯಿ ಕೈಗಡ ಕೇಳಿದರೆ ಎಲ್ಲಿಂದ ತಂದು ಕೊಡಲಿ?" ಎಂದ ಸುಬ್ಬಯ್ಯಶೆಟ್ಟಿ.





# ಆಶೀರ್ವಾದ

ಅನೇಕ ವರ್ಷಗಳ ಹಿಂದೆ ಕಾಂಚೀಪುರದಲ್ಲಿ ಆಂಡಯ್ಯ ನೆಂಬ ಭಾಗ್ಯವಂತನೊಬ್ಬನಿದ್ದ. ಆದರೆ ಅವನು ಎಂಜಲು ಕೈಯಿಂದ ಕಾಗೆಯನ್ನು ಓಡಿಸಲಾರ. ಆ ಪರಮಲೋಭಿಯ ಮನೆ ಬಾಗಿಲಿಗೆ ಭಿಕ್ಷುಕರು ಬಂದರೆ ದೊಣ್ಣೆ ಎತ್ತಿ ಓಡಿಸಿಬಿಡುತ್ತಿದ್ದನು. ಈ ಭಾಗ್ಯವಂತ ಆಂಡಯ್ಯನಿಗೆ ಸ್ವಲ್ಪ ಗೂನಿ ಇದ್ದಿತು. ಆದುದರಿಂದ ಎಲ್ಲರೂ ಅವನನ್ನು ಗೂನಿಯಾಂಡಯ್ಯ ಎಂದು ಹೇಳುತಿದ್ದರು.

ಒಂದುದಿನ ಆಂಡಯ್ಯನ ಮನೆಗೆ ಒಬ್ಬ ಭಿಕ್ಷುಕನು ಬಂದು ಯಾಚನೆಯ ಧ್ವನಿಯನ್ನೆಬ್ಬಿಸಿದ. ಆಂಡಯ್ಯ ಅವನನ್ನು ಹೊರಟುಹೋಗಲು ಹೇಳಿದ.

"ಅಯ್ಯಾ, ಮೂರು ದಿನಗಳಿಂದ ಹಸಿವೆಯಿಂದ ಸಾಯುತ್ತಿದ್ದೇನೆ. ನಡೆಯಲಿಕ್ಕೂ ಕಾಲಿಗೆ ಶಕ್ತಿಯಿಲ್ಲ. ಒಂದು ಮುಷ್ಟಿ ಅನ್ನ ಕೊಡಿ ಸ್ವಾಮಿ. ಪ್ರಾಣ ಉಳಿಸಿ ಸ್ವಾಮಿ" ಎಂದ ಭಿಕ್ಷುಕ.

ಆಂಡಯ್ಯ ಭಿಕ್ಷುಕನನ್ನು ಕಠಿನವಾಗಿ ಬೈದು, ತನ್ನ ಸೇವಕನ ಮೂಲಕವಾಗಿ ಅವನನ್ನು ಹೊರಗೆ ದೂಡಿಸಿಬಿಟ್ಟನು. ಉರುಳಿಬಿದ್ದ ಆ ಭಿಕ್ಷುಕನು ತಡ ಬಡಿಸಿಕೊಂಡೆದ್ದು ಹಸಿವೆಯ ಬಲಹೀನತೆಯನ್ನು ತಾಳಲಾರದೆ, ಗೊಣಗುತ್ತಾ, ಹೆಚ್ಚು ನಡೆಯಲಾರದೆ ದಾರಿಯ ಬದಿಯಲ್ಲಿ ಚಕ್ಕನೆ ಕುಸಿಕುಳಿತ. ಅವನಿಗೆ ನಿರಾಶೆಯಾಯಿತು. ಆಗಾಗ ದೀರ್ಘವಾಗಿ ನಿಟ್ಟು ಸಿರು ಬಿಡುತ್ತ "ಹೂ-ಹಾ-ಅಯ್ಯೋ" ಎನ್ನುತ್ತಿದ್ದನು. ಎಲ್ಲಿಗೆ ಹೋದರೆ ತನ್ನ ಹಸಿವೆ ಇಂಗುವುದೆಂಬುದು ಅವನಗೆ ಗೊತ್ತಾಗಲಿಲ್ಲ.

ಆ ದಾರಿಯಾಗಿ ಕುರುಡನೊಬ್ಬ ನಡೆಯುತ್ತಾ ಬಂದು, ಭಿಕ್ಷುಕನ ನಿಟ್ಟುಸಿರಿನ ಶಬ್ದ ಕೇಳಿ, "ಯಾರಪ್ಪಾ ನೀನು? ಏಕೆ ಹೀಗೆ ನರಳುತ್ತೀ? ಏನಾಯಿತು ನಿನಗೆ?" ಎಂದು ಕೇಳಿದ.

"ಅಯ್ಯಾ, ನಾನೊಬ್ಬ ಭಿಕ್ಷುಕ. ಎಷ್ಟು ಮನೆಗೆ ಹೋಗಿ ಕೇಳಿದರೂ ಮುಷ್ಟಿ ಅನ್ನ ಸಿಗಲಿಲ್ಲ. ಹಸಿವೆ ಯಿಂದ ಸಾಯುತ್ತೇನೆ. ಬೋದ ತಪ್ಪುವ ಹಾಗೆ ಕಾಣುತ್ತದಯ್ಯಾ! ಬೇರೆ ಯಾವರೋಗವೂ ನನಗಿಲ್ಲ. ಹಸಿವೆ, ಹಸಿವೆ!" ಎಂದ ಭಿಕ್ಷುಕ.

"ನನ್ನ ಮನೆ ಪಕ್ಕದಲ್ಲಿದೆ, ಬಾ. ನನ್ನ ಜತೆ ಊಟ ಮಾಡುವಿಯಂತೆ" ಎಂದು ಕುರುಡನು ಭಿಕ್ಷುಕನನ್ನು ಕರೆದುಕೊಂಡು, ತನ್ನ ಮನೆಗೆ ಹೋದನು. ಅಲ್ಲಿ ಕುರುಡನು ತನಗೆ ಹೊಟ್ಟೆ ತುಂಬುವಷ್ಟು ಊಟ

ಎಸ್. ಜಹರ

ತಿಂಡಿಗಳನ್ನು ಕೊಟ್ಟಾಗ ಭಿಕ್ಷುಕನು ಅತ್ಯಂತ ಸಂತೋಷದಿಂದ ಕೈಯೆತ್ತಿ ನಮಸ್ಕಾರ ಮಾಡಿ, "ಭಗವಂತನ ಅನುಗ್ರಹದಿಂದ ನಿಮಗೆ ದೃಷ್ಟಿಬರಲಿ!" ಎಂದು ಆಶೀರ್ವಾದ ಮಾಡಿ ಹೊರಟುಹೋದನು.

ಆ ದಿನ ರಾತ್ರಿ ಕುರುಡನ ಕಣ್ಣುಗಳಿಂದ ಏಕಧಾರೆಯಾಗಿ ಬಹಳ ಹೊತ್ತು ನೀರಿಳಿಯಿತು. ಬೆಳಗಾಗುವಾಗ ಅವನಿಗೆ ದೃಷ್ಟಿ ಬಂದು ಎಲ್ಲವನ್ನೂ ನೋಡಲು ಸಮರ್ಥನಾದನು. ಅವನಿಗಾದ ಸಂತೋಷ ಅಷ್ಟಿಷ್ಟಲ್ಲ. ಆದನ್ನು ನೋಡಿ ಎಲ್ಲರೂ ಕುರುಡ ಭಿಕ್ಷುಕನ ಮಹಿಮೆಯನ್ನು ಬಾಯ್ತುಂಬಾ ಹೊಗಳಿದರು.

ಆ ಕುರುಡನಿಗೆ ಕಣ್ಣು ಬಂದ ವಿಷಯವನ್ನು ಊರೊಳಗೆಲ್ಲಾ ಮಾತಾಡತೊಡಗಿದರು. ನಡೆದ ಸಂಗತಿ ಬಗೆಬಗೆಯ ಕಥೆಗಳ ರೂಪದಲ್ಲಿ ಆಗಲೇ ಪ್ರಚಾರವಾಯಿತು.

ಈ ಸಮಾಚಾರ ಗೂನಿಯಾಂಡಯ್ಯನಿಗೂ ತಿಳಿಯಿತು. ಅವನು ಕಣ್ಣು ಬಂದ ಆ ಕುರುಡನ ಬಳಿಗೆ ಬಂದು, "ನಿನಗೆ ಕಣ್ಣು ಬಂದುದು ನಿಜವೇ ಏನು? ಯಾವನೋ ಭಿಕ್ಷುಕನಿಂದ ಬಂತಂತಲ್ಲಾ? ಮುಚ್ಚಿಡದೆ ಎಲ್ಲಾ ಹೇಳಯ್ಯ" ಎಂದು ಕೇಳಿದನು.

"ನಿನ್ನೆ ನಿಮ್ಮ ಮನೆಯ ಪಕ್ಕದಲ್ಲೇ ಭಿಕ್ಷುಕನೊಬ್ಬ ಆತ ಹೇಗಿದ್ದನೋ ನಾಕಾಣೆ—ಹಸಿವೆಯಿಂದ ನರಳಿಕೊಂಡಿದ್ದ. ನಿಮ್ಮ ಮನೆಯಲ್ಲಿ ಕೂಡಾ ಏನೂ ಕೊಟ್ಟಿಲ್ಲವಂತೆ. ಅವನಿಗೆ ನಿನ್ನೆ ರಾತ್ರಿ ಹೊಟ್ಟೆ ತುಂಬಾ ಊಟ ಹಾಕಿದೆ. ನನ್ನ ಕುರುಡು ಹೋಗಬೇಕೆಂದು ಆಶೀರ್ವಾದ ಮಾಡಿದ. ಅವನ ಆಶೀರ್ವಾದದ ಶಕ್ತಿಯಿಂದ ನನಗೆ ದೃಷ್ಟಿ ಬಂತು. ಇಷ್ಟೇ ನಡೆದುದು" ಎಂದ ಕಣ್ಣು ಬಂದ ಕುರುಡ.

"ಅರರೆ! ಎಂತಹ ತಪ್ಪಾಯಿತು! ಆ ಭಿಕ್ಷುಕನಾರೋ ಯೋಗ ಶಕ್ತಿ ಉಳ್ಳವನಾಗಿರಬೇಕು. ನಾನು ಅವನನ್ನು ಬೈದು ಓಡಿಸಿದೆ. ಅವನಿಗಿಷ್ಟು ಹಾಕಿ ತೃಪ್ತಿ ಪಡಿಸಿದ್ದರೆ ನನ್ನ ಗೂನಿಯನ್ನು ತೆಗೆಯುತ್ತಿದ್ದನಲ್ಲ!" ಎಂದು ಗೂನಿಯಾಂಡಯ್ಯ ತನ್ನೊಳಗೇ ಬಹಳ ನೊಂದುಕೊಂಡನು. ಈಗ ಆ ಭಿಕ್ಷುಕ ಎಲ್ಲಿಯೋ? ಹೇಗಾದರೂ ಸರಿ, ಆ ಭಿಕ್ಷುಕನನ್ನು ಕಂಡು



ಹಿಡಿದು ಕರೆತಂದು ಹೊಟ್ಟೆ ತುಂಬಾ ಊಟ ಹಾಕಿ, ಅವನ ಆಶೀರ್ವಾದದಿಂದ ತನ್ನ ಗೂನಿಯನ್ನು ಕಳೆದುಕೊಳ್ಳಬೇಕೆಂದು ಅಂಡಯ್ಯನು ನಿಶ್ಚಯಿಸಿ ಕೊಂಡನು. ಆ ಭಿಕ್ಷುಕ ಊರೊಳಗೇ ಇರಬಹುದು. ಹುಡುಕಿದರೆ ಸಿಕ್ಕಿದಿರಲಾರ.

ಆ ದಿನವೇ ಅವನು ಊರೆಲ್ಲಾ ಅಲೆದಾಡಿ, ಅದೇ ಭಿಕ್ಷುಕನನ್ನು ಒಂದುಕಡೆಯಲ್ಲಿ ಕಂಡುಹಿಡಿದನು. ಬಹಳ ವಿನಯದಿಂದ ಅವನನ್ನು ತನ್ನ ಮನೆಗೆ ಕರೆದು ಕೊಂಡು ಬಂದು, ಹತ್ತಿರವೇ ಇದ್ದು ಷಡ್ರಸೋಪೇತ ವಾಗಿ ಅವನಿಗೆ ಔತಣದ ಊಟವನ್ನೇ ಮಾಡಿಸಿದನು.

ಭಿಕ್ಷುಕನು ಊಟ ಮುಗಿಸಿ ತೇಗಿ, "ದೇವರ ದಯದಿಂದ ನಿಮ್ಮ ಗೂನಿ ಹೋಗಲಿ" ಎಂದು ಆಶೀರ್ವಾದ ಮಾಡಿ ಹೊರಟು ಹೋದನು. ಆಗ ಅಂಡಯ್ಯನಿಗೆ ತನ್ನ ಗೂನಿ ಹೋದಂತೆಯೇ ಅನಿ ಸಿತು. ಇನ್ನೇನು ಬೆಳಗಾಗುವಾಗ ತಾನು ಎಲ್ಲರ ಹಾಗೆ ನೆಟ್ಟಗೆ ನಿಲ್ಲಬಲ್ಲೆ ಎಂದುಕೊಂಡನು. ಆದರೆ ಮರುದಿನ ಬೆಳಗಾದಾಗ ಅಂಡಯ್ಯನ ಕೋರಿಕೆ ತೀರಲೇ ಇಲ್ಲ. ಅವನ ಗೂನಿ ಇದ್ದ ಹಾಗೆಯೇ ಇದ್ದುದು ಮಾತ್ರವಲ್ಲದೆ, ಸೊಂಟ ಇನ್ನಿಷ್ಟು ಬಾಗಿ ಹೋದಂತೆ ಅವನಿಗೆ ತೋರಿತು.

ಅವನು ಬಹಳ ಕೋಪದಿಂದ ಕಣ್ಣು ಬಂದ ಕುರು ದನ, ಬಳಿಗೆ ಹೋಗಿ "ಛೀಛೀ. ನಿನ್ನ ಮಾತನ್ನು ನಂಬಿ ಮೋಸ ಹೋದೆ. ಅದೇ ಭಿಕ್ಷುಕನನ್ನು ಕರೆದು ಕೊಂಡು ಬಂದು ನಿನಗಿಂತಲೂ ಘನವಾದ ಔತಣದ ಊಟ ಬಡಿಸಿದೆ. ಹೋಗುವ ಮೊದಲು ನನ್ನನ್ನೂ ಗೂನಿ ಹೋಗಲಿ ಅಂತ ಆಶೀರ್ವಾದ ಮಾಡಿದ ನೇನೋ ನಿಜ. ಆದರೆ ಗೂನಿ ಹಾಗೇ ಇದೆಯಲ್ಲಾ! ಇದೆಂಥಾ ಮೋಸ?" ಎಂದ.

ದೃಷ್ಟಿ ಬಂದವನು ನಗುತ್ತ "ನಿಮಗೆ ತಿಳುವಳಿಕೆ ಕಡಮೆ. ಆ ಭಿಕ್ಷುಕನು ದೇವರೇನಲ್ಲ. ನಾನು ಹಸಿವೆ ಯಿಂದ ದಹಿಸುವ ಅವನ ಹೊಟ್ಟೆಗೆ ಅನ್ನ ಹಾಕಿದೆ. ಅವನು ನನ್ನನ್ನು ಮನಸ್ಫೂರ್ತಿ ಆಶೀರ್ವಾದ ಮಾಡಿದ. ದೇವರು ಅವನ ಆಶೀರ್ವಾದವನ್ನು ನಿಜಗೊಳಿಸಿದ. ನೀವು ತುಂಬಿಕೊಂಡಿದ್ದವನ ಹೊಟ್ಟೆಗೆ ಔತಣ ನೀಡಿದಿರಿ. ಅದು ಕೂಡಾ ನಿಮ್ಮ ಸ್ವಾರ್ಥ ಕ್ಕಾಗಿ ಮಾಡಿದ ಕೆಲಸ. ಭಿಕ್ಷುಕ ಅವನ ವಾಡಿಕೆ ಯಂತೆ ಆಶೀರ್ವಾದದ ಮಾತು ಹೇಳಿ ಅವನ ಪಾಡಿಗೆ ಹೋದ. ಅಂತಹ ಆಶೀರ್ವಾದವನ್ನು ಯಾವ ದೇವರು ನಿಜಗೊಳಿಸುತ್ತಾನೆ?" ಎಂದನು.

ಈ ಮಾತಿನಿಂದ ಅಂಡಯ್ಯನ ಬುದ್ಧಿಯೊಳಗೆ ಹೊಸ ಬೆಳಕು ಮಿಂಚಿತು. ಅವನ ಸ್ವಭಾವವು ಪೂರ್ತಿ ಬದಲಾವಣೆಗೊಂಡಿತು. ಅಂದಿನಿಂದ ಅವನು ಕಷ್ಟ ದಲ್ಲಿರುವವರಿಗೆ ಸಹಾಯ ಮಾಡುತ್ತ ಒಳ್ಳೆಯ ಹೆಸರು ಗಳಿಸಿದನು.



# ವೇಷಕ್ಕೆ ತಕ್ಕ ಹಾಗೆ

ಒಂದು ಊರಿನಲ್ಲಿ ಒಬ್ಬ ಹಗಲು ವೇಷದವನಿದ್ದ. ಅವನು ಪ್ರತಿವರ್ಷ ದಸರೆಯ ಸಮಯದಲ್ಲಿ ಒಂಬತ್ತು ದಿನಗಳೂ ಬಗೆಬಗೆಯ ವೇಷಗಳನ್ನು ಹಾಕಿಕೊಂಡು ಹಣ ಸಂಪಾದಿಸುತ್ತಾನೆ.

ಒಂದುವರ್ಷ ಅವನು ಯೋಗಿಯ ವೇಷದಲ್ಲಿ, ರಾಜದರ್ಶನ ಮಾಡಿ, ರಾಜನಿಗೆ ಬ್ರಹ್ಮ ವಾಕ್ಯಗಳನ್ನು ಹೇಳಿದನು. ರಾಜನು ಸಂತೋಷಗೊಂಡು ಅವನಿಗೆ ಬಹುಮಾನ ಕೊಡಲು ನೋಡಿದನು. ಆಗ ಅವನು "ನಾವು ಯೋಗಿಗಳು, ನಮಗೆ ಹಣದ ಅಗತ್ಯವಿಲ್ಲ" ಎಂದು ಹೇಳಿ ಬಹುಮಾನವನ್ನು ನಿರಾಕರಿಸಿ ಹೊರಟು ಹೋದನು.

ಮರುದಿನ ಅವನು ವೇಶ್ಯೆಯ ವೇಷಹಾಕಿಕೊಂಡು ರಾಜನ ಬಳಿಗೆ ಬಂದು ಆಟಪಾಟ ನೃತ್ಯಗಳಿಂದ ರಾಜನನ್ನು ಮೆಚ್ಚಿಸಿದನು. ರಾಜನು ಅವನಿಗೆ ಬಹುಮಾನ ಕೊಡಲು ನೋಡಿದಾಗ ಅವನು "ಮಹಾರಾಜರೇ, ಧಾರಾಳವಾಗಿ ಬಹುಮಾನ ಕೊಡಿಸಿರಿ" ಎಂದು ಕೇಳಿದ.

ರಾಜನು ಆಶ್ಚರ್ಯದಿಂದ "ನಿನ್ನೆ ಬಹುಮಾನ ಬೇಡವೆಂದೆ; ಈ ದಿನ ಹೆಚ್ಚು ಬೇಕೆನ್ನುವೆ? ಹಾಗೇಕೆ?" ಎಂದು ಕೇಳಿದ.

"ಮಹಾರಾಜರೆ, ವೇಷಕ್ಕೆ ತಕ್ಕ ಹಾಗೆ ಪ್ರವರ್ತಿಸಬೇಕಾದ್ದು ನ್ಯಾಯ ತಾನೆ?" ಎಂದ ಹಗಲುವೇಷದವ.

ರಾಜನು ಮೆಚ್ಚಿ ಅವನಿಗೆ ಇಮ್ಮಡಿ ಬಹುಮಾನ ಕೊಟ್ಟ.





# ಮೂರು ಪ್ರಯೋಗಗಳು

ಪೂರ್ವಕಾಲದಲ್ಲಿ ಬಸ್ರಾ ನಗರವನ್ನು ಖುಸ್ರೂ ಎಂಬ ಸುಲ್ತಾನನು ಪಾಲಿಸಿಕೊಂಡಿದ್ದನು. ಅವನ ದರಬಾರಿನಲ್ಲಿ ಅಬ್ದುಲ್ ಎಂಬ ಯುವಕನೊಬ್ಬನಿದ್ದ. ಅವನಿಗೆ ತನ್ನವರೆನ್ನಲು ಯಾರೂ ಇರಲಿಲ್ಲ. ಸುಲ್ತಾನನು ಅಬ್ದುಲನನ್ನು ತನ್ನ ಕುದುರೆಗಳ ಸಂರಕ್ಷನನ್ನಾಗಿ ನಿಯಮಿಸಿದ್ದನು. ಅಬ್ದುಲ್ ತನ್ನ ಕೆಲಸವನ್ನು ಬಹಳ ದಕ್ಷತೆಯಿಂದ ನಿರ್ವಹಿಸುತ್ತಿದ್ದನು. ಆದರೆ ಅವನು ಕುದುರೆಗಳ ದಾಣಾ ಖರ್ಚಿಗಾಗಿ ಕೊಡಲ್ಪಡುವ ಹಣವನ್ನು ಸ್ವಲ್ಪ ಸ್ವಲ್ಪ ತನ್ನ ಜೇಬಿಗೆ ಇಳಿಸಿಕೊಳ್ಳುತಿರುವನೆಂದು ಕೆಲವರು ಆಡಿಕೊಳ್ಳುತ್ತಿದ್ದರು. ಇದು ಸುಲ್ತಾನ ಖುಸ್ರೂನ ಕಿವಿಗೂ ಬಿದ್ದಿತು.

ಕೂಡಲೇ ಸುಲ್ತಾನನು ಅಬ್ದುಲನನ್ನು ತನ್ನ ಬಳಿಗೆ ಕರೆಯಿಸಿ, "ಕುದುರೆಗಳ ತೀನಿಯ ಖರ್ಚಿನಲ್ಲಿ ನೀನೂ ಸ್ವಲ್ಪ ಒಳಗೆ ಹಾಕಿಕೊಳ್ಳುವೆಯಂತೆ? ಇದು ನಿಜವೋ ?" ಎಂದು ಕೇಳಿದನು.

ಅಬ್ದುಲನಿಗೆ ಏನು ಹೇಳಬೇಕೆಂದು ತೋರಲಿಲ್ಲ. ಎಂಜಲು ನುಂಗುತ್ತ ತಲೆತಗ್ಗಿಸಿಕೊಂಡು ನಿಂತ. ತತ್ಕ್ಷಣವೇ ಅವನ ಉದ್ಯೋಗ ಬದಲಾವಣೆ ಗೊಂಡಿತು. ಅವನು ನೂರು ಮಂದಿ ಸೈನಿಕರಿಗೆ ಸಂಬಳ ಕೊಟ್ಟು, ಅವರಿಂದ ರಸೀದಿ ಪಡೆದುಕೊಳ್ಳುವ ಕೆಲಸ ಮಾಡಬೇಕಾಯಿತು. ಅಬ್ದುಲನ ಪ್ರವರ್ತನೆಯನ್ನು ಪರೀಕ್ಷಿಸಲಿಕ್ಕಾಗಿಯೇ ಖುಸ್ರೂ ಅವನನ್ನು ಈ ಉದ್ಯೋಗದಲ್ಲಿ ಹಾಕಿದ್ದನು. ಆ ಸಂಗತಿ ಅಬ್ದುಲನಿಗೆ ತಿಳಿಯದು.

ಈ ಹೊಸ ಕೆಲಸದಲ್ಲಿ ಕೂಡಾ ಅಬ್ದುಲನು ಲಂಚಕ್ಕೆ ಕೈಹಾಚಲು ಮೊದಲು ಮಾಡಿದನು. ಅವನು ಸೈನಿಕರಿಗೆ ಪೂರ್ತಿ ಸಂಬಳ ಕೊಡದೆ ಒಂದೆರಡು ನಾಣ್ಯಗಳನ್ನು ತನ್ನ ಜೇಬಿಗಿಳಿಸಿಕೊಂಡನು. ಇದು ಬೇಗನೇ ಬಯಲಾಗಿ ಹೋಯಿತು.

ಹಣಕ್ಕೆ ಸಂಬಂಧವಿರುವ ಯಾವ ಕೆಲಸವನ್ನೂ ಇವನಿಗೆ ಕೊಡಲೇ ಬಾರದೆಂದುಕೊಂಡು ಸುಲ್ತಾನ ಖುಸ್ರೂ, ಅಬ್ದುಲನನ್ನು ಹೂ ವಿನ ತೋಟದ ಕಾವಲುಗಾರನನ್ನಾಗಿ ಮಾಡಿದನು. ಅವನ ಕೈಕೆಳಗೆ ಹತ್ತು ಮಂದಿ ಕೆಲಸಗಾರರು ತೋಟದ ಕೆಲಸ ಮಾಡುತ್ತಿದ್ದರು. ಅಬ್ದುಲ್ ಅವರ ಮೇಲು ವಿಚಾರಕನಾಗಿರಬೇಕಾಯಿತು. ಇದರಲ್ಲಿ ಎರಡು ತಿಂಗಳ ವರೆಗೆ ಯಾವ ಫಿರ್ಯಾದೂ ಬರಲಿಲ್ಲ.

ಒಂದುದಿನ ಖುಸ್ರೂ ಸುಲ್ತಾನನ ಚಿಕ್ಕ ಮಗ ತೋಟದಲ್ಲಿ ಆಡುವಾಗ ಚೆಂಡನ್ನು ಬಲವಾಗಿ ಒದ್ದು

ವಿ. ಎಸ್. ನಾರಾಯಣ

ಬೀಸಿದ. ಆ ಚೆಂಡು ಅಬ್ದುಲನಿಗೆ ತಾಗಿತು. ಅಬ್ದುಲ್ ಧಡಾರನೆ ಬಿದ್ದುಬಿಟ್ಟ. ಹುಡುಗ ತುಂಬಾ ಹೆದರಿ ಅಬ್ದುಲನ ಬಳಿಗೆ ಬಂದು ಅವನನ್ನು ಮೆಲ್ಲಗೆ ಅಲುಗಾಡಿಸಿ ನೋಡಿದ. ಆಗ ಅಬ್ದುಲ್ ಮೆಲ್ಲಗೆ ಕಣ್ಣು ತೆರೆದು, "ಈ ಸಂಗತಿಯನ್ನು ಸುಲ್ತಾನರೊಂದಿಗೆ ಹೇಳುತ್ತೇನೆ ಇರು!" ಎಂದು ಹೆದರಿಸಿದ.

ಅದನ್ನು ಕೇಳಿ ಸುಲ್ತಾನನ ಮಗ ಇನ್ನಷ್ಟು ಹೆದರಿದ. ಅವನಿಗೆ ತಂದೆಯ ಮುಂದೆ ವಿಪರೀತ ಭಯವಿತ್ತು. ಈ ಸಂಗತಿಯನ್ನು ತಂದೆಯ ಹತ್ತಿರ ಹೇಳಬೇಡವೆಂದು ಹುಡುಗ ಅಂಗಲಾಚತೊಡಗಿದ. ಆಗ ಅಬ್ದುಲ್ ಹುಡುಗನ ಕೊರಳಿನಲ್ಲಿರುವ ಮುತ್ತಿನ ಹಾರವನ್ನು ಮುಟ್ಟಿ ತೋರಿಸಿದ. ಹುಡುಗ ಅಬ್ದುಲನನ್ನು ಒಳಿತು ಮಾಡಿಕೊಳ್ಳಬೇಕೆಂದು, ಕೊರಳಿನಿಂದ ಹಾರವನ್ನು ತೆಗೆದು ಕೊಟ್ಟ.

ಅಂದಿನಿಂದ ಸುಲ್ತಾನನ ಚಿಕ್ಕ ಮಗ ಅಬ್ದುಲನಿಗೆ ಆಗಾಗ ಹಣವನ್ನೂ, ಚಿಕ್ಕಚಿಕ್ಕ ಚಿನ್ನದ ಒಡವೆಗಳನ್ನೂ ಯಾರಿಗೂ ಗೊತ್ತಾಗದ ಹಾಗೆ ತಂದು ಕೊಡುತ್ತಲೇ ಇದ್ದ. ಈ ಸಂಗತಿ ತೋಟದ ಕೆಲಸಗಾರರಿಗೂ ತಿಳಿಯಿತು. ಅವರು ಅಬ್ದುಲನೊಂದಿಗೆ ಈ ಸಂಗತಿ ಸುಲ್ತಾನರ ಹತ್ತಿರ ಹೇಳಿಬಿಡುತ್ತೇವೆಂದು ಹೆದರಿಸಿದರು. ಅದನ್ನು ಕೇಳಿ ಅಬ್ದುಲನು ಹೆದರುವುದಕ್ಕೆ ಬದಲಾಗಿ, "ಓಹೋ, ಸುಲ್ತಾನರ ಮಗ ನನಗೆ ಕೊಡುವ ಬಹುಮಾನಗಳಲ್ಲಿ ಭಾಗ ಸಾಲದೆಂದು ಬೆದರಿಸುವಿರಾ? ನಾನೇ ಸುಲ್ತಾನರೊಂದಿಗೆ ಫಿರ್ಯಾದು ಮಾಡುತ್ತೇನೆ" ಎಂದು ಹೇಳಿದ.

ಅದನ್ನು ಕೇಳಿ ತೋಟದ ಕೆಲಸದಾಳುಗಳಿಗೆ ತುಂಬಾ ದಿಗಿಲಾಯಿತು. ಅವರು ಹೆದರಿರುವುದನ್ನು ತಿಳಿದು ಅಬ್ದುಲ್, ಅವರೆಲ್ಲಾ ತನಗೆ ತಿಂಗಳಿಗೆ ಎರಡೆರಡು ತಾಮ್ರದ ನಾಣ್ಯ ಕೊಡುವ ಹಾಗಿದ್ದರೆ ಅವರ ಮೇಲೆ ಸುಲ್ತಾನರ ಹತ್ತಿರ ಫಿರ್ಯಾದು ಮಾಡಲಾರೆನೆಂದ. ತಮ್ಮ ಮೇಲಧಿಕಾರಿಯನ್ನು ಹೆದರಿಸಿದುದಕ್ಕೆ ಇದು ತಮಗಾದ ಶಿಕ್ಷೆಯೆಂದುಕೊಂಡು ತಿಂಗಳಿಗೆರಡು ತಾಮ್ರದ ನಾಣ್ಯ ಕೊಡಲು ತೋಟದ ಕೆಲಸಗಾರರು ಒಪ್ಪಿದರು.



ಅಷ್ಟರಲ್ಲಿ ಸುಲ್ತಾನನ ಹೆಂಡತಿ ತನ್ನ ಮಗನ ಆಭರಣಗಳು ಮಾಯವಾಗುತ್ತಿರುವ ಸಂಗತಿಯನ್ನು ಕಂಡುಹಿಡಿದು ಮಗನನ್ನು ಗದರಿಸಿ ಕೇಳಿದಳು. ಅವನು ನಿಜ ಸಂಗತಿಯನ್ನೆಲ್ಲಾ ಹೇಳಿಬಿಟ್ಟ.

ಈ ಸಂಗತಿ ಖುಸ್ರೂ ಸುಲ್ತಾನನವರೆಗೂ ಹೋಯಿತು. ಅಬ್ದುಲನು ಸುಲ್ತಾನನ ಮಗನ ಕೈಯಿಂದ ನಗನಾಣ್ಯಗಳನ್ನು ಪಡೆದುಕೊಂಡಿರುವ ನೆಂದು ತೋಟದ ಕೆಲಸಗಾರರು ಸಾಕ್ಷಿ ಹೇಳಿದರು. ತಾವೂ ಅವನಿಗೆ ತಿಂಗಳಿಗೆರಡು ತಾಮ್ರದ ನಾಣ್ಯ ಕೊಡುವುದನ್ನೂ ತಿಳಿಸಿದರು. ಖುಸ್ರೂ ಅಬ್ದುಲ ನನ್ನು ತನ್ನ ದಿವಾಣದೊಳಗಿನಿಂದಲೇ ಹೊರಗೆ ಹಾಕಿಸಿ "ಇನ್ನು ಮೇಲೆ ನಿನ್ನ ಮುಖ ನನಗೆ ತೋರಿಸಬೇಡ" ಎಂದ.

ಅಬ್ದುಲ್ ಹೊರಗೆ ಹೋಗಿ ಎಲ್ಲೋ ಅಲೆದಾಡಿ ಮೂರುದಿನಗಳ ಮೇಲೆ ಕೋಟೆಯ ಸಿಂಹದ್ವಾರದ ಹೊರಗಿನ ಬದಿಯಲ್ಲಿ ಮೊಕ್ಕಾಂ ಹೂಡಿದ. ಅವನು ತನ್ನ ಮುಂದೆ ಕೆಲವು ದಪ್ಪ ಹೊದಿಕೆಯ ಪುಸ್ತಕ ಗಳನ್ನು ಇಟ್ಟುಕೊಂಡು, ತಾನು ನೋಡಿದುದನ್ನೂ, ಕೇಳಿದುದನ್ನೂ ಯಾವ ತಾರತಮ್ಯವೂ ಇಲ್ಲದೆ ಬರೆ ಯುತ್ತಾ ಕುಳಿತ. ಕೋಟೆಯೊಳಗೆ ಯಾರು ಹೋದರೋ, ಯಾರು ಹೊರಗೆ ಬಂದರೋ, ಅವರೊಂದಿಗೆ ಏನೇನು ಸರಕುಗಳಿವೆಯೋ ಅದನ್ನೆಲ್ಲಾ ಬರೆಯುವನು. ಕಡೆಗೆ ಎಲ್ಲಿಯಾದರೂ ಕತ್ತೆಯ ಕೂಗೋ, ದನದ ಹಂಭಾ ಶಬ್ದವೋ ಕಿವಿಗೆ ಬಿದ್ದರೂ ಆ ಪುಸ್ತಕದಲ್ಲಿ ಬರೆಯುವನು. ಆ ಸಂಗತಿಯನ್ನು ಕೇಳಿ ಸುಲ್ತಾನನು ಬಿದ್ದುಬಿದ್ದು ನಕ್ಕನು. ಎಲ್ಲರೂ ಅಬ್ದುಲನಿಗೆ ಬುದ್ಧಿ ಕೆಟ್ಟಿರಬೇಕೆಂದು ಅಂದುಕೊಂಡರು.

ಹೀಗೆ ಕೆಲವು ತಿಂಗಳು ಕಳೆದ ಮೇಲೆ ಒಂದುದಿನ ಅರ್ಧರಾತ್ರಿಯ ಹೊತ್ತಿನಲ್ಲಿ ಅಬ್ದುಲ್ ಅವನ ಸ್ಥಳ ದಲ್ಲಿ ಕುಳಿತುಕೊಂಡು ತೂಕಡಿಸುತ್ತಾ ಇದ್ದನು. ಆಗ ಕೋಟೆಯ ಉತ್ತರ ದಿಕ್ಕಿನಲ್ಲಿರುವ ಕಂದಕದ ನೀರಿ ನೊಳಗೆ ಯಾವುದೋ ವಸ್ತು ಬಿದ್ದಂತೆ ಮೂರುಸಾರಿ ಶಬ್ದ ಕೇಳಿಸಿತು. ಆಮೇಲೆ ಯಾವ ಶಬ್ದವೂ ಬರಲಿಲ್ಲ. ಅಬ್ದುಲ್ ತಟಕ್ಕನೆ ತನ್ನ ಪುಸ್ತಕವನ್ನು ತೆರೆದು,



"ಉತ್ತರದ ಕಂದಕದಲ್ಲಿ ಮೂರು ಭೊಳೋಂಗಳು" ಎಂದು ಬರೆದು ಪುಸ್ತಕ ಮುಚ್ಚಿಟ್ಟ.

ನಡೆದ ಸಂಗತಿ ಏನೆಂದರೆ, ಅದರ ಮುಂಚಿನ ದಿನದಲ್ಲಿ ಯಾವುದೋ ಉತ್ಸವವಿದ್ದುದರಿಂದ ಕಾವಲುಗಾರರು ಮೈ ಮರೆಯುವಂತೆ ಕುಡಿದು ಕುಣಿದು ನಿದ್ದೆ ಹೋಗಿದ್ದರು. ಆ ರಾತ್ರಿ ಮೂವರು ದೊಡ್ಡ ಕಳ್ಳರು ಕೋಟೆಯೊಳಗೆ ಪ್ರವೇಶಿಸಿ ಖಜಾನೆಯನ್ನು ಕೊಳ್ಳೆ ಹೊಡೆದು ಮೂರು ದೊಡ್ಡ ಪೆಟ್ಟಿಗೆಗಳ ತುಂಬಾ ಚಿನ್ನದ ಹಾಗು ಬೆಳ್ಳಿಯ ನಾಣ್ಯಗಳನ್ನು ತುಂಬಿಸಿ ಕಂದಕದವರೆಗೆ ತಂದರು. ರಾತ್ರಿಯ ಹೊತ್ತಿನಲ್ಲಿ ಕಂದಕದ ಸಂಕವನ್ನು ಎತ್ತಿ ಹಾಕಿರುವುದರಿಂದ ಆಳವೂ ಅಗಲವೂ ಆದ ಕಂದಕವನ್ನು ದಾಟಲು ಕಳ್ಳರಿಗಾಗಲಿಲ್ಲ. ಮರುದಿನ ಅವಕಾಶವಾದಾಗ ತೆಗೆದುಕೊಂಡು ಹೋಗೋಣವೆಂದುಕೊಂಡು ಮೂರು ಪೆಟ್ಟಿಗೆಗಳನ್ನೂ ಕಂದಕದೊಳಗೆ ಹಾಕಿ, ಹೊರಟುಹೋಗಿದ್ದರು ಆ ಕಳ್ಳರು.

ಬೆಳಗಾಗುತ್ತಲೇ ಖಜಾನೆ ದರೋಡೆಯಾದ ಸಂಗತಿ ಎಲ್ಲೆಲ್ಲೂ ವ್ಯಾಪಿಸಿತು. ಎಷ್ಟು ಹುಡುಕಿದರೂ ಕಳ್ಳರಾಗಲೀ ಕಳವಿನ ವಸ್ತುಗಳಾಗಲೀ ಸಿಗಲಿಲ್ಲ.

ಆಗ ಸುಲ್ತಾನನ ಹತ್ತಿರ ಅವನ ಅಂತರಂಗಿಕ ಮಂತ್ರಿಯೊಬ್ಬ, "ಅಬ್ದುಲ್ ಕೋಟೆ ಬಾಗಿಲ ಹತ್ತಿರ ಕುಳಿತುಕೊಂಡು ಹಗಲೂ ರಾತ್ರಿಯೂ ಬರೆಯುತ್ತಿರುತ್ತಾನಷ್ಟೇ? ಅವನ ಪುಸ್ತಕದಲ್ಲಿ ಈ ಕಳವಿನ ಸೂಚನೆಯೇನಾದರೂ ಸಿಗಬಹುದು, ವಿಚಾರಿಸೋಣವೆ?" ಎಂದು ಪ್ರಸ್ತಾವಿಸಿದ.

ಸುಲ್ತಾನ್ ಖುಸ್ರೂ ಅಬ್ದುಲನನ್ನು ಬರೆದ ಪುಸ್ತಕಗಳೊಂದಿಗೆ ಬರಬೇಕೆಂದು ಆಜ್ಞಾಪಿಸಿದನು. ಕಳ್ಳತನ ನಡೆದ ರಾತ್ರಿ ಅಬ್ದುಲ್ ಬರೆದ ಪುಸ್ತಕದಲ್ಲಿ, "ಉತ್ತರದ ಕಂದಕದಲ್ಲಿ ಮೂರು ಭೊಳೋಂಗಳು" ಎಂದು ಬರೆದಿತ್ತು.

ಅದೇನೆಂದು ಸುಲ್ತಾನನಿಗೆ ಅರ್ಥವಾಗದೆ, "ಏನದು ಭೊಳೋಂಗಳು?" ಎಂದು ಅಬ್ದುಲನನ್ನು ವಿವರಣೆ ಕೇಳಿದ.

"ಹುಜೂರರೇ, ನೀರಿನಲ್ಲಿ ಭಾರವಾದ ವಸ್ತು ಬೀಳುವಾಗ ಭೊಳೋಂ ಎಂಬ ಶಬ್ದವಾಗುವುದಿಲ್ಲವೆ? ಅಂತಹ ಮೂರು ಶಬ್ದಗಳು ಒಂದರ ಹಿಂದೊಂದು ಕೇಳಿಸಿದುವು" ಎಂದ ಅಬ್ದುಲ್.

ಕೂಡಲೇ ಕೆಲವುಂದಿ ಮುಳುಗು ಬಂಟರನ್ನು ಕಂದಕದಲ್ಲಿ ಇಳಿಸಿ ಮುಳುಗಿ ಹುಡುಕಿಸಿದಾಗ ಮೂರು ಪೆಟ್ಟಿಗೆಗಳೂ ದೊರಕಿದುವು. ಅವುಗಳಲ್ಲಿ ಖಜಾನೆಯಿಂದ ಹೋದ ಸೊತ್ತುಗಳು ತುಂಬಿಕೊಂಡಿದ್ದುವು. ಕಳ್ಳರು ಸಿಗದಿದ್ದರೂ ಸೊತ್ತು ಸಿಕ್ಕಿತು. ಸುಲ್ತಾನ ಖುಸ್ರೂ ಬಹಳ ಸಂತೋಷಗೊಂಡು, ಅಬ್ದುಲನನ್ನು ತನ್ನ ಸಲಹಾದಾರನನ್ನಾಗಿ ಇಟ್ಟುಕೊಂಡನು.





# ಅದೃಷ್ಟಲಗ್ನ

ಒಂದಾನೊಂದು ಚಿಕ್ಕ ದೇಶದಲ್ಲಿ ವಿಜಯವರ್ಮ ನೆಂಬ ಒಬ್ಬ ಚಿಕ್ಕ ರಾಜನಿದ್ದ. ಅವನಿಗೆ ವಿಜಯ ಎಂಬ ಒಬ್ಬಳು ಕುಮಾರಿ ಇದ್ದಳು. ಸುಂದರಿಯಾದ ವಿಜಯಳಿಗೆ ಹದಿನಾರನೇ ವಯಸ್ಸು ತುಂಬಿದಾಗ ತಂದೆ ಅವಳ ಬೆರಳಿಗೆ ಒಂದು ಉಂಗುರವನ್ನು ಹಾಕಿ ದನು. ಅದೊಂದು ಸಾಮಾನ್ಯವಾದ ಉಂಗುರವಾದರೂ ರಾಜನಿಗೆ ಅದು ಪ್ರಾಣಪ್ರದವಾದ ಉಂಗುರವಾಗಿತ್ತು. ಏಕೆಂದರೆ ಆ ಉಂಗುರವು ಕೆಲವು ವರ್ಷಗಳ ಹಿಂದೆ ತೀರಿಹೋದ ವಿಜಯಳ ತಾಯಿಯದು.

ಒಂದುದಿನ ವಿಜಯ ತನ್ನ ದಾಸಿಯೊಂದಿಗೆ ತಿರು ಗಾಡುತ್ತಾ ಸಮೀಪದಲ್ಲಿದ್ದ ನದಿಯ ಬದಿಗೆಹೋದಳು. ಅವಳು ದಾಸಿಯೊಂದಿಗೆ ದೋಣಿಯಲ್ಲಿ ಕುಳಿತು ಜಲ ವಿಹಾರಕ್ಕೆ ಪ್ರಾರಂಭಿಸಿದಳು. ನದಿ ಅಷ್ಟೇನೂ ಆಳ ವಾಗಿರಲಿಲ್ಲ. ದೋಣಿಯಲ್ಲಿ ಹೋಗುವಾಗ ವಿಜಯ ತನ್ನ ಕೈಯನ್ನು ನೀರಿನಲ್ಲಿ ಮುಳುಗಿಸಿ ಬೆರಳುಗಳೆಡೆ ಯಿಂದ ನೀರು ಪ್ರವಹಿಸುವುದನ್ನು ನೋಡಿ ಆನಂದಿಸಿ ಕೊಂಡಿದ್ದಳು. ಆಗ ಉಂಗುರವು ಜಾರಿ ನೀರಿನಲ್ಲಿ ಬಿದ್ದು ಹೋಯಿತು. ವಿಜಯ ಗಾಬರಿಯಿಂದ ಸ್ವರವೆತ್ತಿ ಕೂಗಿದ ಕೂಡಲೇ ದೋಣಿಯವನು ಹುಟ್ಟು ಹಾಕುವುದನ್ನು ನಿಲ್ಲಿಸಿ, ನದಿಯೊಳಗೆ ಇಳಿದು ಉಂಗುರವು ಬಿದ್ದ ಪ್ರಾಂತದಲ್ಲಿ ಬಹಳ ವೇಳೆ ಹುಡು ಕಾಡಿದ. ಉಂಗುರವು ಸಿಗಲೇ ಇಲ್ಲ. ಈ ಸಮಾಚಾರ ಆಗಲೇ ವಿಜಯವರ್ಮನಿಗೂ ತಿಳಿಯಿತು. ಅವನು ಮಗಳನ್ನು ಕ್ಷಮಿಸಲಾರದೆ ಹೋದ.

ಅವಳು ಸಣ್ಣ ಮುಖದಿಂದ ಮನೆಗೆ ಬಂದು, ಉಂಗುರ ಕಳೆದುಹೋದ ಸಂಗತಿಯನ್ನು ಹೇಳಿದಾಗ, "ನಾನು ಕೊಟ್ಟ ಉಂಗುರವನ್ನು ಬಿಸಾಡಿಬಿಟ್ಟೆಯಾ? ಇದು ಕ್ಷಮಿಸಲು ಸಾಧ್ಯವಿಲ್ಲದ ತಪ್ಪು. ಅದು ನನ್ನ ಪ್ರಾಣಕ್ಕೆ ಸಮಾನವಾದ ಉಂಗುರ. ನಾನು ನಿನ್ನೊಂ ದಿಗೆ ಇನ್ನೊಂದು ವಿಷಯವನ್ನೂ ಹೇಳಿಬಿಡುತ್ತೇನೆ. ನೀನು ಮದುವೆಯಾಗಲು ಇಷ್ಟಪಡುವ ಮಹೇಶ ನೆಂಬ ಯುವಕನು ನನ್ನ ಹತ್ತಿರ ಬಂದಿದ್ದ. ನೀನು ಅವನನ್ನು ಬಲ್ಲೆಯಾ?" ಎಂದು ಕೇಳಿದ. "ಗೊತ್ತಿದೆ" ಎಂದಳು ವಿಜಯ. "ನಿನಗೆ ಅವನ ಮೇಲೆ ಇಷ್ಟವಿದೆಯೆ?" ಎಂದು ವಿಜಯವರ್ಮನು ಕೇಳಲು, "ಇದೇ ಅಪ್ಪಾ" ಎಂದಳು ತಲೆತಗ್ಗಿಸಿ.

"ನಿನ್ನ ದುರದೃಷ್ಟ! ನನ್ನಂಥವನ ಮಗಳಿಗೆ ಅವನು ತಕ್ಕ ವರನಾಗಿ ನನಗೆ ತೋರುವುದಿಲ್ಲ.

ಎಲ್. ವಿಜಯಲಕ್ಷ್ಮಿ

ಅವನು ನಿನ್ನನ್ನು ಮದುವೆಯಾಗಲು ಸಾಧ್ಯವಿಲ್ಲ ವೆಂದು ಹೇಳಿ ಅವನನ್ನು ಕಳುಹಿಸಿಬಿಟ್ಟೆ. ನೀನು ನನಗೆ ಇಷ್ಟವಾದ ಉಂಗುರವನ್ನು ಬಿಸಾಡಿದೆ. ನಾನು ನಿನಗೆ ಇಷ್ಟದವನಾದ ವರವನ್ನು ಕಳುಹಿಸಿಬಿಟ್ಟೆ. ಈ ಮಾತ್ರಕ್ಕೆ ನಿನ್ನ ಮದುವೆ ನಿಂತುಹೋಗುವುದಿಲ್ಲ. ನನ್ನ ಉಂಗುರವನ್ನು ಯಾವನು ತಂದು ಕೊಡುವನೋ ಅವನಿಗೇ ನಿನ್ನನ್ನು ಕೊಟ್ಟು ಮದುವೆ ಮಾಡುತ್ತೇನೆಂದು ಡಂಗುರ ಸಾರಿಸುತ್ತೇನೆ" ಎಂದು ಮಗಳೊಂದಿಗೆ ಹೇಳಿದ ವಿಜಯವರ್ಮ.

ರಾಜನು ಸಾರಿಸಿದ ಡಂಗುರವನ್ನು ಕೇಳಿದ ಕೂಡಲೇ ಎಲ್ಲೆಲ್ಲಿನ ಯುವಕರೂ ಬಂದು ವಿಜಯಳು ಬಿಸಾಡಿದ ಉಂಗುರವನ್ನು ಹುಡುಕಲಿಕ್ಕಾಗಿ ನದಿಯನ್ನು ಕಲಕಿ ಹಾಕಿದರು. ಉಂಗುರ ದೊರಕಲೇ ಇಲ್ಲ.

ವಿಜಯಳು ಮದುವೆಯಾಗಲು ಇಷ್ಟಪಟ್ಟ ಯುವಕನಾದ ಮಹೇಶನು ಮಾತ್ರ ಈ ಸ್ಪರ್ಧೆಯಲ್ಲಿ ಭಾಗವಹಿಸಲೇ ಇಲ್ಲ. ವಿಜಯಳನ್ನು ತನಗೆ ಕೊಡುವುದಿಲ್ಲವೆಂದು ವಿಜಯವರ್ಮನು ಹೇಳಿದ ಕ್ಷಣದಿಂದಲೂ ಅವನಿಗೆ ವಿರಕ್ತಿಯುಂಟಾಗಿತ್ತು. ಅವನು ಹಗಲೆಲ್ಲಾ ನದೀತೀರದ ಅರಣ್ಯದಲ್ಲಿ ತಿರುಗಾಡಿಕೊಂಡಿದ್ದನು.

ಒಂದುದಿನ ಅವನು ನದಿಯ ಆಚೆಯ ಬದಿಯಲ್ಲಿ ಬೇಟೆಯಾಡಲಿಕ್ಕಾಗಿ ಬಿಲ್ಲು ಬಾಣಗಳೊಂದಿಗೆ ನದಿಯ ಬದಿಯಲ್ಲಿ ಸಾಗಿದನು. ಅಕಸ್ಮಾತ್ತಾಗಿ ನದಿಯ ಇನ್ನೊಂದು ಬದಿಯಲ್ಲಿ ಅವನಿಗೆ ಒಂದು ಜಿಂಕೆ ಕಾಣಿಸಿತು. ಕೂಡಲೇ ಬಾಣವನ್ನು ಗುರಿನೋಡಿ ಜಿಂಕೆಯ ಮೇಲೆ ಪ್ರಯೋಗಿಸಿದನು. ಅದೇ ಸಮಯದಲ್ಲಿ ದೊಡ್ಡದೊಂದು ಮೀನು ನೀರಿನ ಮೇಲೆ ಹಾರಿತು. ಮಹೇಶನ ಬಾಣವು ಆ ಮೀನನ್ನು ಚುಚ್ಚಿಕೊಂಡಿತು. ದೊಡ್ಡ ಶಬ್ದದೊಂದಿಗೆ ಮೀನು ನೀರಿನಲ್ಲಿ ಬಿದ್ದಿತು. ಆ ಶಬ್ದವನ್ನು ಕೇಳಿ ಜಿಂಕೆ ಮಹೇಶನನ್ನು ನೋಡಿ, ಓಡಿಹೋಗಿ ಮರಗಳ ಮಧ್ಯದಲ್ಲಿ ಅದೃಶ್ಯವಾಯಿತು. ಮಹೇಶನು ಆ ಮೀನನ್ನು ನೀರಿನಿಂದ ತೆಗೆದು ಮನೆಗೆ ಒಯ್ದನು.

ಅವನ ತಾಯಿ ಆ ಮೀನನ್ನು ಹೆಚ್ಚುವಾಗ ಅದರ ಹೊಟ್ಟೆಯೊಳಗೆ ಉಂಗುರವಿರುವುದು ಕಾಣಿಸಿತು. ಅದು ವಿಜಯಳು ಕಳೆದುಕೊಂಡ ಉಂಗರವೇ.

ಮಹೇಶನು ಆ ಉಂಗುರವನ್ನು ತೆಗೆದುಕೊಂಡು ಹೋಗಿ ರಾಜನಿಗೆ ಸಮರ್ಪಿಸಿದನು. ವಿಜಯವರ್ಮನಿಗೆ ಮಹೇಶನ ಮೇಲೆ ಇಷ್ಟವಿಲ್ಲದೆ ಹೋದರೂ ಹೇಳಿದ ಮಾತನ್ನು ಉಳಿಸಿಕೊಳ್ಳಲೇ ಬೇಕಾಯಿತು. ಅವನಿಗೇ ವಿಜಯಳನ್ನು ಕೊಟ್ಟು ಮದುವೆ ಮಾಡಿದನು ಆ ರಾಜ.

ವಿಜಯಳು ಅದೃಷ್ಟಶಾಲಿನಿ. ಅವಳು ಉಂಗುರವನ್ನು ಕಳೆದುಕೊಳ್ಳದಿರುತ್ತಿದ್ದರೆ ತಾನು ಬಯಸಿದವನನ್ನು ಮದುವೆಯಾಗಲು ಸಾಧ್ಯವಾಗುತ್ತಿರಲಿಲ್ಲ.





# ಮಂತ್ರದ ಮಹಿಮೆ

ಒಂದು ಸಣ್ಣ ಗ್ರಾಮದಲ್ಲಿ ಒಬ್ಬ ಗಟ್ಟಿಗನಾದ ಬ್ರಾಹ್ಮಣನಿದ್ದ. ಅವನು ಕರ್ಮಠ ಬ್ರಾಹ್ಮಣನಾಗಿದ್ದುದು ಮಾತ್ರವಲ್ಲದೆ ಹರಿಕಥೆ ಹೇಳುವುದರಲ್ಲಿ ಬಹಳ ಪ್ರಸಿದ್ಧಿ ಪಡೆದಿದ್ದ. ಆಗಾಗ ದೂರದೂರ ಗ್ರಾಮಗಳ ಜನರು ಕೂಡಾ ಅವನನ್ನು ಕರೆಯುತ್ತಿದ್ದರು.

ಒಂದುದಿನ ಈ ಬ್ರಾಹ್ಮಣನಿಗೆ ಹತ್ತು ಮೈಲು ದೂರದಲ್ಲಿರುವ ಒಂದು ಗ್ರಾಮದಿಂದ ಕರೆಬಂದಿತು. ಆ ರಾತ್ರಿ ಆ ಊರಿನಲ್ಲಿ ಈ ಬ್ರಾಹ್ಮಣನಿಂದ ಹರಿಕಥೆ ನಡೆಯಿಸಬೇಕೆಂದಿದ್ದರು. ಬ್ರಾಹ್ಮಣನು ಸಾಯಂಕಾಲವಾಗುವುದರೊಳಗೆ ಅಲ್ಲಿಗೆ ಹೋಗಿ ತಲುಪುವಂತೆ ಮನೆಯಿಂದ ಹೊರಟಿದ್ದನು. ಆದರೆ ಆಕಸ್ಮಿಕವಾಗಿ ಆಕಾಶದಲ್ಲಿ ಮೇಘವು ಹರಡಿ ಒಂದು ಗಂಟೆ ಮುಂಚಿತವಾಗಿಯೇ ಸುತ್ತುಮುತ್ತಲೂ ಕತ್ತಲೆ ಆವರಿಸಿತು. ಮತ್ತೆ ಸ್ವಲ್ಪ ಹೊತ್ತಿನೊಳಗೆ ಮಳೆಯೂ ಸುರಿಯತೊಡಗಿತು. ಗಾಳಿಯೂ ಬೀಸುತಿತ್ತು.

ಕತ್ತಲೆಯಲ್ಲಿ ಆ ಬ್ರಾಹ್ಮಣನಿಗೆ ದಾರಿ ಗೊತ್ತಾಗಲಿಲ್ಲ. ಅವನು ಗಮ್ಯಸ್ಥಾನವನ್ನು ಸೇರುವ ಆಸೆಯನ್ನು ಬಿಟ್ಟುಕೊಟ್ಟು ಪಕ್ಕದ ಗ್ರಾಮಕ್ಕೆ ಹೋಗಿ ಪರಿಚಿತರ ಮನೆಯಲ್ಲಿ ಈ ರಾತ್ರಿಯನ್ನು ಕಳೆಯಲು ನಿಶ್ಚಯಿಸಿಕೊಂಡು ಮುಂದೆ ಮುಂದೆ ಸಾಗಿದನು. ಎಷ್ಟು ದೂರ ನಡೆದರೂ ಅವನು ಅಂದುಕೊಂಡಿರುವ ಗ್ರಾಮ ಕಾಣಿಸಲೇ ಇಲ್ಲ. ತಾನು ದಿಕ್ಕು ತಪ್ಪಿದೆನೆಂದು ಅವನಿಗೆ ಗೊತ್ತಾಯಿತು. ಒಂದುಕಡೆ ಸ್ವಲ್ಪ ನಿಂತು ಸುತ್ತಲೂ ದೃಷ್ಟಿ ಹರಸಿ ನೋಡಿದನು. ಒಂದು ದಿಕ್ಕಿನಲ್ಲಿ ದೀಪದ ಕಾಂತಿ ಮಿಣುಕು ಮಿಣುಕನೆ ಕಾಣಿಸಿತು,

ಬದುಕಿದೆಯಾ ಬಡಜೀವವೇ ಎಂದುಕೊಂಡು ಆ ಬ್ರಾಹ್ಮಣನು ಆ ಕಾಂತಿಯಕಡೆಗೆ ಹೋಗಿ ಒಂದು ಮನೆಯನ್ನು ತಲಪಿದನು. ಬಹಳ ಹೊತ್ತು ತಟ್ಟಿದ ಮೇಲೆ ಆ ಮನೆಯ ಬಾಗಿಲು ತೆರೆದು ಮನೆಯವನು ಬ್ರಾಹ್ಮಣನನ್ನು ನೋಡಿ, "ಚೆನ್ನಾಗಿ ನೆನೆದಿದ್ದೀರಲ್ಲಾ! ಒಳಗೆ ಬನ್ನಿ" ಎಂದು ಕರೆದನು.

ಬ್ರಾಹ್ಮಣನು ಒಳಗೆ ಹೋದನು. ಆ ಮನೆ ಹಳೇಕಾಲದ ಭವನದಂತೆ ಕಾಣಿಸಿತು. ದ್ವಾರಬಂಧಗಳು ಹಳೇಕಾಲದ ಚಿತ್ರ ಕೆತ್ತನೆಗಳಿಂದ ಕೂಡಿದ್ದುವು. ಆದರೆ ಆ ಮನೆಯಲ್ಲಿರುವ ಗಂಡಹೆಂಡಿರು ತೀರ ಸಾಮಾನ್ಯರಾಗಿ ಕಾಣುತ್ತಿದ್ದರು. ಮನೆಯವನು ಬ್ರಾಹ್ಮಣನ ಆಲೋಚನೆಯನ್ನು ಗ್ರಹಿಸಿಕೊಂಡವನ

ಆರ್. ಗಂಗಾಧರಭಟ್ಟ

ಹಾಗೆ, "ಮನೆ ದೊಡ್ಡದೇನೋ ನಿಜವೇ. ಇದರಲ್ಲಿ ಯಾರೂ ವಾಸಿಸುವುದಿಲ್ಲ. ಆದುದರಿಂದ ಇದು ನಮಗೆ ಬಾಡಿಗೆ ಇಲ್ಲದೆಯೇ ಸಿಕ್ಕಿದೆ. ಆಯಿತಷ್ಟೇ ಸ್ವಾಮಿ, ನಾವು ಮಲಗಲು ಹೋಗುತ್ತೇವೆ. ನೀವು ಉಪ್ಪರಿಗೇ ಮೇಲಿನ ಕೋಣೆಗೆ ಹೋಗಿ ನಿಮ್ಮ ಒದ್ದೆ ಬಟ್ಟೆಯನ್ನು ಹಿಂಡಿ ಆರಿಸಿರಿ. ಅಲ್ಲೇ ಈ ರಾತ್ರಿ ಮಲಗಲೂ ಬಹುದು" ಎಂದನು.

ಬ್ರಾಹ್ಮಣನು ಮೇಲೆ ಹೋಗಿ ತಾನು ಉಟ್ಟು ಕೊಂಡ ಬಟ್ಟೆಯನ್ನು ಆರಹಾಕಿ, ತನ್ನ ಜಿಂಕೆಯ ಚರ್ಮದ ಚೀಲದೊಳಗಿನಿಂದ ಒಣ ಬಟ್ಟೆ ತೆಗೆದು ಕಟ್ಟಿಕೊಂಡು ಮಂಚದ ಮೇಲೆ ಮಲಗಿದನು. ಈಗ ಸ್ವಲ್ಪ ಬೆಚ್ಚಗಾದುದರಿಂದ ನಿದ್ರೆಯೂ ಬಂದಿತು. ಆದರೆ ಸ್ವಲ್ಪ ಹೊತ್ತಿಗೆಲ್ಲಾ ಹಸಿವಿನಿಂದ ಎಚ್ಚೆತ್ತನು. ಕೆಳಗಿನಿಂದ ಏನೋ ಶಬ್ದ ಕೇಳಿಸುತ್ತಿತ್ತು. ಅಡಿಗೇ ಪದಾರ್ಥಗಳ ವಾಸನೆಯೂ ಬರುತ್ತಿದ್ದಿತು. ಇದರಿಂದ ಬ್ರಾಹ್ಮಣನ ಹಸಿವೆ ಇನ್ನಿಷ್ಟು ಕೆರಳಿತು.

ಮನೆ ತುಂಬಾ ಜನರಿರುವ ಹಾಗೆ ತೋರಿತು. ಈ ಸಂದರ್ಭದಲ್ಲಿ ದಾಕ್ಷಿಣ್ಯಪಡದೆ ಕೆಳಗೆ ಹೋಗಿ ಅವರೊಂದಿಗೆ ಕುಳಿತು ತಾನು ಕೂಡಾ ಊಟ ಮಾಡಿಬಿಡಬೇಕೆಂದು ಬ್ರಾಹ್ಮಣನು ಯೋಚಿಸುತ್ತಿರುವಾಗ, ಯಾರೋ ಮೆಟ್ಟಿಲ ಕೆಳಗೆ ಬಂದು "ಬಂದಯ್ಯಾ! ಊಟಕ್ಕೆ ಬನ್ನೀ!" ಎಂದು ಕೂಗಿದರು.

ಬ್ರಾಹ್ಮಣನ ಹೆಸರು ಬಂದಯ್ಯನೆಂದಲ್ಲದಿದ್ದರ ಬೇಗ ಬೇಗ ಮೆಟ್ಟಿಲಿಳಿದು ಕೆಳಗೆ ಹೋದನು. ಕೆಳಗ ದೊಡ್ಡ ಚಾವಡಿಯಲ್ಲಿ ಹೆಂಗಸರೂ ಗಂಡಸರ ಅತ್ತಿತ್ತ ತಿರುಗಾಡುತ್ತಿದ್ದರು. ಒಂದು ಬದಿಯಲ್ಲಿ ಎ ಹಾಕುತ್ತಿದ್ದಾರೆ. ಇನ್ನೊಂದು ಬದಿಯಲ್ಲಿ ಬಡಿಸಲು ಪ್ರಾರಂಭವಾಯಿತು. ಕೆಲವರು ಎಲೆಗಳ ಮುಂ ಬಂದು ಕುಳಿತುಕೊಳ್ಳಲು ಪ್ರಾರಂಭಿಸಿರು.

ಬ್ರಾಹ್ಮಣನೂ ಒಂದು ಎಲೆಯ ಮುಂದೆ ಕು ತನು. ಅಷ್ಟರಲ್ಲಿ ಅವನಿಗೆ ತಾನು ಸಂಧ್ಯಾವಂದ ಮಾಡಲಿಲ್ಲವೆಂದು ನೆನಪಾಯಿತು, ಕೂಡಲೇ ಅವನ ಕ್ಲುಪ್ತವಾಗಿ ಸಂಧ್ಯಾವಂದನೆ ಮಾಡುತ್ತ ಕೈಯಲ್ಲಿಷ್ಟು ನೀರು ತೆಗೆದುಕೊಂಡು "ಉತ್ತಿಷ್ಠಂತು ಭೂ ಪಿಶಾಚಾಃ" ಎನ್ನುತ್ತ ಆ ನೀರನ್ನು ಕೆಳಕ್ಕೆಬಿಟ್ಟನು.

ಮರುಕ್ಷಣದಲ್ಲಿ ಅಲ್ಲಿದ್ದ ಜನರೆಲ್ಲಾ ಮಾಯವಾ ಹೋದರು. ಎಲೆಗಳೂ, ಅಡಿಗೇ ಪದಾರ್ಥಗಳ ಸಮಸ್ತವೂ ಮಾಯವಾವಾದುವು. ಒಂದು ಪಾಳ ಬಿದ್ದ ಕತ್ತಲೆ ಗೋಡೆಗಳ ಶಿಥಿಲದ ನಡುವ ಬ್ರಾಹ್ಮಣನು ಕುಳಿತು ಮಿಕಿಮಿಕಿ ನೋಡುತ್ತಿದ್ದ ತರುವಾಯ ಧೈರ್ಯದಿಂದ ಸಂಧ್ಯಾವಂದನ ಮುಗಿಸಿ, ಇನ್ನೂ ತನಗೆ ತಿಳಿದ ಮಂತ್ರಗಳನ್ನು ಪಠಿಸುತ್ತ ಬೆಳಗುಮಾಡಿ, ಕ್ಷೇಮವಾಗಿ ತನ್ನ ಮನೆ ಸೇರಿದ ಆ ಬ್ರಾಹ್ಮಣ.





# ಸಿಕ್ಕಿಬೀಳದ ಕಳ್ಳರು

ಒಂದು ಊರಿನಲ್ಲಿ ಇಬ್ಬರು ಒಂದೇ ಗುಣದ ಕಳ್ಳಕೋರಮರು ಸ್ನೇಹಿತರಾಗಿದ್ದರು. ಅವರು ತಾವಿರುವ ಊರಿನಲ್ಲಿ ಮಾತ್ರ ಎಂದಿಗೂ ಕಳ್ಳತನ ಮಾಡುತ್ತಿರಲಿಲ್ಲ. ಕಳ್ಳತನ ಮಾಡಬೇಕೆಂದು ತೋರಿದಾಗ ಅಕ್ಕಪಕ್ಕಗಳ ಯಾವುದಾದರೊಂದು ಊರಿಗೆ ಹೋಗುತ್ತಿದ್ದರು. ಆ ಇಬ್ಬರಲ್ಲಿ ಒಬ್ಬನಾದ ರಂಗನೆಂಬವನು ಕಳ್ಳತನದಲ್ಲಿ ಸಿದ್ಧಹಸ್ತನಾದವನು. ಎರಡನೇಯವ ರಾಮು, ರಂಗನ ಅನುಚರನಂತಿರುವವನು. ರಂಗನು ಹೇಳಿದ ಕೆಲಸ ಮಾಡುವುದೇ ರಾಮನ ಕೆಲಸ.

ಒಂದುದಿನ ರಾತ್ರಿ ಅವರು ಕುರಿಗಳನ್ನು ಕದಿಯಬೇಕೆಂದು ಒಂದು ಊರಿಗೆ ಹೊರಟರು. ರಾತ್ರಿ ಬಹಳ ಹೊತ್ತು ಕಳೆದ ಮೇಲೆ ಅವರು ಗ್ರಾಮದ ಕೊನೆಯಲ್ಲಿರುವ, ಸ್ಮಶಾನದ ಬದಿಯಲ್ಲಿದ್ದ ಶಿವಾಲಯಕ್ಕೆ ಹೋದರು. ನಡೆಯುವಾಗ ದಾರಿಯಲ್ಲಿ ರಾಮನ ಕಾಲಿಗೆ ಮುಳ್ಳು ಕಂತಿತ್ತು. ರಂಗನು ರಾಮನನ್ನು ಧ್ವಜಸ್ತಂಭದ ದಿಮ್ಮಿಯ ಮರೆಯಲ್ಲಿ ಕುಳಿತಿರುವಂತೆ ಹೇಳಿ, ತಾನು ಕುರಿಗಳನ್ನು ಕದ್ದು ತರಲು ಊರೊಳಗೆ ಹೋದನು. ಕೃಷ್ಣಪಕ್ಷದ ಕತ್ತಲೆಯ ರಾತ್ರಿ. ಸುತ್ತುಮುತ್ತಲೂ ನಿಶ್ಶಬ್ದವಾಗಿದ್ದಿತು. ರಾಮನು ತನ್ನೊಂದಿಗೆ ಹುರಿದ ಬಟಾಣಿಗಳನ್ನು ತಂದುಕೊಂಡಿದ್ದ. ಸುಮ್ಮನೆ ಕುಳಿತಿರಲು ಬೇಸರವೆನಿಸಿ, ಪೊಟ್ಟಣವನ್ನು ಬಿಚ್ಚಿ ಬಟಾಣಿಗಳನ್ನು ಬಾಯಿಗೆ ಹಾಕಿಕೊಂಡು ಹಲ್ಲಿನಿಂದ ಕಡಿದು ಸಿಪ್ಪೆ ಉಗುಳುತ್ತಾ ತಿನ್ನತೊಡಗಿದನು.

ಮಂಟಪದ ಮೇಲೆ ಮಲಗಿ ನಿದ್ರೆಮಾಡುತ್ತಿದ್ದ ಶಿವಾಲಯದ ಸೇವಕನೊಬ್ಬ, ಆಕಸ್ಮಿಕವಾಗಿ ಎಚ್ಚರಕ್ಕೆ ಬಂದನು. "ಕಟಕಟ" ಎಂಬ ಶಬ್ದ ಅವನ ಕಿವಿಗೆ ಬೀಳುತಿತ್ತು. ಸ್ಮಶಾನದಲ್ಲಿ ರಾತ್ರಿಯ ಹೊತ್ತಿನಲ್ಲಿ ದೆವ್ವಗಳು ತಿರುಗುತ್ತಿವೆಯೆಂದು ಅವನು ಕೇಳಿದ್ದನು. ಆದರೆ ಅವು ಸ್ಮಶಾನದಲ್ಲೇ ಇರುತ್ತವೆಂದೂ, ಹುಗಿದ ಶವಗಳನ್ನು ಕಿತ್ತು ತಿನ್ನುತ್ತವೆಂದೂ ಅವನ ನಂಬುಗೆಯಿತ್ತು. ಆ ದೆವ್ವಗಳು ನೆಟ್ಟಗೆ ಗುಡಿಯೊಳಗೇ ಬಂದು ಎಲುಬುಗಳನ್ನು ಕೊರೆದು ತಿನ್ನುತ್ತವೆಂದು ಅವನು ಕನಸಿನಲ್ಲಿಯೂ ನೆನೆದಿರಲಿಲ್ಲ.

ಆಲಯದೊಳಗೆ ಬಂದಿರುವ ದೆವ್ವವನ್ನು ಓಡಿಸುವುದಕ್ಕೆ ಪೂಜಾರಿಯೇ ಬರಬೇಕು. ಅದಕ್ಕೆ ತಕ್ಕ ಮಂತ್ರಗಳಿಂದ ಅವನು ಅದನ್ನು ಬೇಗನೇ ಓಡಿಸಬೇಕಾಗಿದೆ. ತಡಮಾಡಿದರೆ ತನ್ನ ಮೇಲೆ ತಪ್ಪು

ಬಿ. ಬಾಬೂರಾವ್

ಬಂದೀತು. ಅವನು ಬೇಗನೇ ಮಂಡಪದಿಂದ ಇಳಿದು ಪೂಜಾರಿಯ ಮನೆಗೆ ಓಡಿ ಬಾಗಿಲು ತಟ್ಟಿ "ಸ್ವಾಮಿ ಸ್ವಾಮಿ, ಸ್ಮಶಾನದೊಳಗಿನ ದೆವ್ವಗಳು ಶವಗಳನ್ನು ದೇವಾಲಯದೊಳಗೆ ಎಳೆದು ತಂದು ತಿನ್ನುತ್ತಿವೆ. ಬೇಗ ಬಂದು ಅವುಗಳನ್ನು ಓಡಿಸಿಬಿಡಿ. ಇಲ್ಲದಿದ್ದರೆ ದೇವಾಲಯಕ್ಕೆ ಅಪ್ರತಿಷೆ" ಎಂದನು.

ಪೂಜಾರಿ ಧಪ್ಪ ಶರೀರದವನು. ಅದರ ಮೇಲೆ ಕೀಲುವಾತದ ಉಪದ್ರ ಉಳ್ಳವನು. ವಾತದ ನೋವು ರಾತ್ರಿಯಲ್ಲಿ ಜಾಸ್ತಿಯಾಗಿರುತ್ತಿತ್ತು. ಕಾಲು ಎತ್ತಿ ಇಡುವಾಗ ಪ್ರಾಣ ಹೋಗುವ ಹಾಗೆ ತೋರುತ್ತಿತ್ತು. "ನಾನು ಹೆಜ್ಜೆ ಎತ್ತಿ ಇಡಲಾರೆನಲ್ಲಪ್ಪಾ? ಏನು ಮಾಡೋಣವೋ?" ಎಂದ ಪೂಜಾರಿ.

"ನೀವು ಬಾರದೆ ವಿಧಿಯಿಲ್ಲ ಸ್ವಾಮಿ. ನಡೆಯಲಾಗದಿದ್ದರೆ ನನ್ನ ಭುಜದ ಮೇಲೆ ಹತ್ತಿ ಕುಳಿತುಕೊಳ್ಳಿ" ಎಂದ ಸೇವಕ. ಬೇರೆ ಉಪಾಯವಿಲ್ಲದೆ ಪೂಜಾರಿ ಸೇವಕನ ಭುಜಗಳ ಮೇಲೆ ಹತ್ತಿ ಕುಳಿತ. ಸೇವಕ ಹೊತ್ತುಕೊಂಡು ಹೊರಟನು.

ಇಷ್ಟರೊಳಗೆ ಅಲ್ಲಿ ರಾಮನು ಬಟಾಣಿ ಕಾಳುಗಳನ್ನು ತಿಂದು ಮುಗಿಸಿ, ಯಾರೋ ಬರುತ್ತಿರುವ ಶಬ್ದ ಕೇಳಿ ಧ್ವಜಸ್ತಂಭದ ಬದಿಯಿಂದ ಬಗ್ಗಿ ನೋಡಿದನು. ಯಾವನೋ ಒಬ್ಬ ತನ್ನ ಭುಜಗಳ ಮೇಲೆ ಯಾವುದೋ ದಪ್ಪವಾದುದನ್ನು ಹೊತ್ತುಕೊಂಡು ಬರುವಂತೆ ಅವನಿಗೆ ತೋರಿತು. ಬರುವವ
ರಂಗನೇ ಅಂದುಕೊಂಡು–"ಒಳ್ಳೇ ಬಲಿತದ್ದ
ತಂದೆಯಾ?" ಎಂದು ಕೇಳಿದ.

ಈ ಮಾತು ಕೇಳಿದ ಕೂಡಲೇ ದೇವಾಲಯ
ಸೇವಕನ ಪ್ರಾಣವೇ ಹಾರಿಹೋದಂತಾಯಿತು. ಅವನ
ಪೂಜಾರಿಯನ್ನು ಬೊತ್ತನೆ ಕೆಳಗೆ ಕೆಡವಿ ಬೆನ್ನ
ಕಾಲು ಕೊಟ್ಟು ಓಡಿಹೋದನು. ಭೀತಿಯಿಂ
ಪೂಜಾರಿಗೂ ಕಾಲಿನ ನೋವು ಗೊತ್ತಾಗದೆ ಹಮ್ಮೋ
ಎಂದೆದ್ದು ಶರವೇಗದಿಂದ ಓಡಿಹೋಗಿ ತನ್ನ ಮ
ಸೇರಿ ಬಾಗಿಲಿಗೆ ತಾಳಹಾಕಿಕೊಂಡನು.

ತರುವಾಯ ಸ್ವಲ್ಪಹೊತ್ತಿನ ಮೇಲೆ ರಂಗನ
ಚಿಕ್ಕದೊಂದು ಕುರಿಯನ್ನು ತೆಗೆದುಕೊಂಡು ರಾಮ
ಬಳಿಗೆ ಬಂದು, "ಒಂದೇ ಸಿಕ್ಕಿತು. ಸಾಕು, ಬಾ
ಹೋಗೋಣ" ಎಂದ. ಇಬ್ಬರೂ ಕತ್ತಲೆಯಲ್ಲಿ
ತಮ್ಮ ಊರಿನ ಕಡೆಗೆ ಹೊರಟು ಹೋದರು.

ಮರುದಿನ ಬೆಳಿಗ್ಗೆ ದೇವಾಲಯದ ಸೇವಕನು ಕಸ
ಬಳಿಯುತ್ತಾ, ಧ್ವಜಸ್ತಂಭದ ಹಿಂದೆ ಸೇರಿಕೊಂಡಿದ್ದ
ಬಟಾಣಿಯ ಸಿಪ್ಪೆಗಳನ್ನೂ, ಕೆಲವು ಬಟಾಣಿಗಳನ್ನೂ
ನೋಡಿದನು. ಹಿಂದಿನ ರಾತ್ರಿ ತಾನು ಕೇಳಿದ ಕಟಕಟ
ಶಬ್ದಗಳು ಏನೆಂಬುದು ಈಗ ಅವನಿಗೆ ಅರ್ಥ
ವಾಯಿತು. ಅವನು ಆ ಸಂಗತಿಯನ್ನು ಪೂಜಾರಿಗೆ
ಹೊರತು ಮತ್ತಾರಿಗೂ ಹೇಳಲಿಲ್ಲ.





# ಹೆಂಗಸಿನ ಜಾಣ್ಮೆ

ಅನೇಕ ವರ್ಷಗಳ ಹಿಂದೆ ಒಂದು ಊರಿನಲ್ಲಿ ಪೂರ್ಣಮ್ಮನೆಂಬ ವಿಧವೆ ಹೆಂಗುಸಿದ್ದಳು. ಅವಳು ತನ್ನ ಜೀವನಕ್ಕಾಗಿ ತನ್ನ ಮನೆಯ ಮುಂದಿನ ಜಗಲಿಯಲ್ಲಿ ಚಿಕ್ಕದೊಂದು ಅಂಗಡಿಯನ್ನಿಟ್ಟು ಕೊಂಡಿದ್ದಳು. ಹೀಗೆ ಒಂಟಿಯಾಗಿ ಜೀವಿಸುತ್ತ ಬಡ ಹೆಂಗುಸಿನ ಹಾಗೆ ಕಾಣುತ್ತಿದ್ದರೂ, ಅವಳ ಪೆಟ್ಟಿಗೆಯಲ್ಲಿ ಕೆಲವು ಬಂಗಾರದ ನಗಗಳೂ, ಸ್ವಲ್ಪ ನಗದಿ ಹಣವೂ ಸೇರಿ ಇತ್ತೆಂದು ಊರಿನೊಳಗೆ ಮಾತಾಡಿಕೊಳ್ಳುತ್ತಿದ್ದರು. ಆ ಮಾತು ನಿಜವಾಗಿಯೂ ಇತ್ತು. ಹೀಗಿರುವಾಗ ಒಮ್ಮೆ ಸುತ್ತುಮುತ್ತಲಿನ ಪ್ರಾಂತಗಳಲ್ಲಿ ಕಳ್ಳತನ ನಡೆಯುತ್ತಾ, ಪೂರ್ಣಮ್ಮನಿರುವ ಊರಿನಲ್ಲಿ ಕೂಡಾ ಒಂದೆರಡು ಮನೆಗಳಲ್ಲಿ ಕಳುವಾದುವು.

ಇದರಿಂದ ಊರಿನೊಳಗೆ ಭಯವುಂಟಾಯಿತು. ಯುವಕರು ಕಳ್ಳರನ್ನು ಕಂಡುಹಿಡಿಯ ಬೇಕೆಂದು ಸೊಂಟ ಕಟ್ಟಿದರು. ಕಳ್ಳರನ್ನು ಹಿಡಿದುಕೊಟ್ಟವರಿಗೆ ಒಳ್ಳೆಯ ಬಹುಮಾನ ಕೊಡುವೆನೆಂದು ಗ್ರಾಮಾಧಿಕಾರಿ ಪ್ರಕಟನೆ ಮಾಡಿದನು. ಬೇರೆ ಊರಿನವನಾದ ಕಳ್ಳನಿಗೆ ಈ ವಿವರಗಳೊಂದೂ ಗೊತ್ತಿರಲಿಲ್ಲ. ಆ ಒಂದುವೇಳೆ ಕಳ್ಳನು ತನ್ನ ಮನೆಗೆ ಬಂದರೆ ಏನು ಮಾಡುವುದೆಂದು ಪೂರ್ಣಮ್ಮ ಒಂದೇ ಸಮನೆ ಆಲೋಚನೆ ಮಾಡುತ್ತಿದ್ದಳು. ಕಡೆಗೆ ಒಂದು ನಿರ್ಣಯಕ್ಕೂ ಬಂದಳು. ತನ್ನ ಉಪಾಯವು ಜಯಶೀಲವಾಗಿಬಿಟ್ಟರೆ ಗ್ರಾಮಾಧಿಕಾರಿ ಪ್ರಕಟಿಸಿದಂತೆ ಬಹುಮಾನವನ್ನೂ ಪಡೆಯಬಹುದೆಂದು ಅವಳಿಗೆ ತೋರಿತು. ಅಂದಿನಿಂದ ಪೂರ್ಣಮ್ಮ ಕಳ್ಳನ ಆಗಮನವನ್ನು ಆತುರದಿಂದ ಇದಿರು ನೋಡಿಕೊಂಡಿದ್ದಳು. ರಾತ್ರಿ ನಿದ್ದೆ ಮಾಡುವುದನ್ನೇ ಬಿಟ್ಟಳು.

ಅವಳು ನಿರೀಕ್ಷಿಸುವ ಕಳ್ಳ ಒಂದುದಿನ ರಾತ್ರಿ ಪೂರ್ಣಮ್ಮನ ಮನೆಗೆ ಬಂದೇಬಂದನು. ಪೂರ್ಣಮ್ಮ ಎಚ್ಚರವಾಗೇ ಇದ್ದಳು. ಕಳ್ಳನು ಮನೆಯೊಳಗೆ ಪ್ರವೇಶಿಸುವ ಶಬ್ದ ಕೇಳುತ್ತಲೇ ಅವಳು, "ನೀನೇನಾ ಅಪ್ಪಾ ?" ಎಂದಳು ಸಣ್ಣ ಸ್ವರದಿಂದ,

ಕಳ್ಳ ದಿಗ್ಭ್ರಾಂತನಾಗಿ ಮಾತಾಡದೆ ನಿಂತ.

"ನಿನ್ನ ಹಣ ತೆಗೆದುಕೊಂಡು ಹೋಗುವಿಯಾ ? ಇಷ್ಟು ಹೊತ್ತಿಗೆ ಎರಡು ಪಾಲು ಆಗಿರುತ್ತೆ. ನೋಡಿ ಗುಟ್ಟಾಗಿ ಎಣಿಸಿಕೋ ಅಪ್ಪ. ಬೇಗ ಹೋಗಿಬಿಡು. ನಿನ್ನ ಪುಣ್ಯ" ಎಂದು ಪೂರ್ಣಮ್ಮ ಪುನಃ ಹೇಳಿದಳು. ಅವಳೇನು ಮಾತಾಡುತ್ತಿರುವಳೆಂದು ಕಳ್ಳನಿಗೆ

ಕೆ. ಗೋವಿಂದರಾವ್

ಗೊತ್ತಾಗಲಿಲ್ಲ, ಒಂದುವೇಳೆ ಇವಳು ಹುಚ್ಚು ಹೆಂಗುಸಾಗಿರಬಹುದೇ ಎಂಬ ಅನುಮಾನ ಅವನಿಗಾಯಿತು.

ಆಗ ಪೂರ್ಣಮ್ಮ ಮಂಚದಿಂದೆದ್ದು, "ನೀನು ನಿನ್ನೆ ಬಂದವನು ಅಲ್ಲವೇನು ? ಆತ ನನ್ನ ಪೆಟ್ಟಿಗೆಯ ಗುಟ್ಟನ್ನು ಬೇರೆಯವರಿಗೆ ಹೇಳುತ್ತಾನೋ ಏನು ಕರ್ಮ ? ಹೀಗಾದರೆ ಊರ ಹಿರಿಯರು ನನ್ನನ್ನು ಬದುಕಲಿಕ್ಕೆ ಬಿಡಲಾರರಲ್ಲಾ ! ನಿನ್ನ ನೋಡಿದರೆ— ನಿನ್ನೆ ಬಂದವತಾನೆ ?" ಎನ್ನುತ್ತಾ ದೀಪವನ್ನು ಬೆಳಗಿಸಿದಳು. ಒಂದು ಕ್ಷಣ ಅಲ್ಲಿಂದ ಓಡಿಹೋಗಬೇಕೆಂದು ಕಳ್ಳನಿಗೆ ತೋರಿತು. ಆದರೆ ಅವಳಿಂದ ತನಗೆ ಅಪಾಯವೇನಿಲ್ಲವೆಂದು ತಟ್ಟಿದಾಗ, ಅವಳ ಮಾತುಗಳಿಗೆ ಅರ್ಥವೇನೆಂದು ತಿಳಿಯುವ ಬಯಕೆಯಿಂದ ಹಾಗೇ ಧೈರ್ಯವಾಗಿ ನಿಂತುಬಿಟ್ಟ.

ದೀಪದ ಬೆಳಕಿನಲ್ಲಿ ಕಳ್ಳನನ್ನು ಚೆನ್ನಾಗಿ ನೋಡುತ್ತ ಪೂರ್ಣಮ್ಮ, "ಸರಿಯೋ ! ನೀನು ನಿನ್ನೆ ಬಂದ ಮಾಮೂಲು ಕಳ್ಳನಲ್ಲ. ನಿನಗೆ ನನ್ನ ಪೆಟ್ಟಿಗೆಯ ಗುಟ್ಟನ್ನು ಅವನೇ ಹೇಳಿದ್ದಾನೆ. ಹೀಗಾದರೆ ಹೇಗಪ್ಪ ? ನಾನು ಸಿಕ್ಕಿಬಿದ್ದರೇನು ಗತಿ ?" ಎಂದಳ

"ನನಗೆ ಯಾರೂ ಏನೂ ಹೇಳಲಿಲ್ಲ. ಏನು ಅದ ರಹಸ್ಯ ? ನೀನೇ ಹೇಳಿಬಿಡು" ಎಂದ ಕಳ್ಳ.

"ಗೊತ್ತಾಯಿತೇ ನಿನಗೆ ? ತೋರಿಸುತ್ತೇನೆ ಇರು" ಎಂದು ಹೇಳಿ ಪೂರ್ಣಮ್ಮ ತನ್ನ ಮರದ ಪೆಟ್ಟಿ ಯನ್ನು ತೆರೆದು, ಅದರೊಳಗಿದ್ದ ಆಭರಣಗಳನ್ನೂ ಹಣವನ್ನೂ ಮೇಲಕ್ಕೆ ತೆಗೆದು ಲೆಕ್ಕ ಮಾಡಿ, "ನಿನ್ನ ನಮ್ಮ ಕಳ್ಳ ಇದರೊಳಗೆ ಇಟ್ಟಿರುವುದೆಲ್ಲವೂ ಎರಡ ಪಾಲು ಹೆಚ್ಚಾಗಿದೆ. ಈ ರಾತ್ರಿ ಬಂದು ತೆಗೆದ ಕೊಂಡು ಹೋಗುವುದಾಗಿ ಹೇಳಿದ್ದ. ಯಾಕೋ ಬರಲಿಲ್ಲ. ನೀನೇ ಅವನೆಂದುಕೊಂಡು ನನ್ನ ಪೆಟ್ಟಿಗೆಯ ರಹಸ್ಯ ನಿನಗೆ ಹೇಳಿಬಿಟ್ಟೆ. ಒಬ್ಬನೇ ಕಳ್ಳನಾದ ಪರವಾಗಿದ್ದಿಲ್ಲ. ಇನ್ನು ನೀವಿಬ್ಬರು ಕಳ್ಳರು ನನ್ನ ಮನೆಗೆ ಬಂದು ಹೋಗುತ್ತಾ ಇದ್ದರೆ ಅಧಿಕಾರಿಗಳಿ ಗೊತ್ತಾಗಿಬಿಡುತ್ತದೆ. ನನ್ನನ್ನು ಶೂಲಕ್ಕೆ ಹಾಕಿ ಬಿಡುತ್ತಾರೆ. ಅಪ್ಪಾ ಕಳ್ಳಾ, ನಿನಗೆ ಪುಣ್ಯ ಬರುತ್ತೆ. ನಿನ್ನ ಪಾಡಿಗೆ ಹೋಗಿಬಿಡು. ನನ್ನ ಪೆಟ್ಟಿಗೆಯ ಧರ್ಮ



ಯಿಂದ ಆ ಕಳ್ಳ ಚಿಕ್ಕಚಿಕ್ಕ ಕಳ್ಳತನಗಳಿಂದಲೇ ಸುಖ ವಾಗಿ ಬದುಕಿಕೊಂಡಿದ್ದಾನೆ. ನನಗೂ ಒಂದಿಷ್ಟು ಧಾನ್ಯವೋ ಹಣವೋ ಕೊಡುತ್ತಾನೆ. ಆದುದರಿಂದ ನನ್ನ ರಹಸ್ಯ ಕಾಪಾಡಪ್ಪ" ಎಂದಳು.

ಅವಳ ಮಾತು ಕೇಳುತ್ತಿದ್ದಂತೆ ಕಳ್ಳನಿಗೆ ಆಶೆ ಹುಟ್ಟಿತು. ಅವನು ಪೂರ್ಣಮ್ಮನನ್ನು ಕುರಿತು, "ನೋಡು ಚಿಕ್ಕಮ್ಮ, ನನ್ನ ಧನವನ್ನು ಕೂಡಾ ನಿನ್ನ ಪೆಟ್ಟಿಗೆಯ ಸಹಾಯದಿಂದ ಎರಡು ಪಾಲು ಮಾಡಿ ಕೊಟ್ಟರೆ ನಿನ್ನ ಋಣ ಇಟ್ಟುಕೊಳ್ಳಲಾರೆ. ನಿನ್ನ ರಹಸ್ಯವನ್ನು ನನ್ನ ಪ್ರಾಣದಂತೆ ಕಾಪಾಡುತ್ತೇನೆ. ನಾಳೆ ರಾತ್ರಿ ನಾನು ಶೇಖರಿಸಿದ್ದನ್ನೆಲ್ಲಾ ತಂದು ನಿನ್ನ ಪೆಟ್ಟಿಗೆಯಲ್ಲಿಡುತ್ತೇನೆ. ಅದನ್ನು ಎರಡು ಪಾಲು ಮಾಡಿಸಿಡು. ನಿನಗೆ ಯಾವ ಅಪಾಯವೂ ಬಾರದಂತೆ ನೋಡಿಕೊಳ್ಳುತ್ತೇನೆ. ಸಾಧ್ಯವಿಲ್ಲ ಎನ್ನಬೇಡ" ಎಂದು ಕೇಳಿಕೊಂಡನು.

"ಏನೋ ಅಪ್ಪ, ನೀನು ಈ ಊರಿನವನೂ ಅಲ್ಲ. ಊರಿನವರು ಕಳ್ಳನನ್ನು ಹಿಡಿಯಲು ವಿಶ್ವ ಪ್ರಯತ್ನ ಮಾಡುತ್ತಾ ಇದ್ದಾರೆ. ನೀನು ಗುಟ್ಟು ತಿಳಿದು ತುಂಬಾ ಬೇಡಿಕೊಳ್ಳುವುದರಿಂದ, ಒಂದೇ ಒಂದು ಸಾರಿ ನನ್ನ ಪೆಟ್ಟಿಗೆಯನ್ನು ಉಪಯೋಗಿಸಲು ಕೊಡುತ್ತೇನಪ್ಪ. ಆಮೇಲೆ ನೀನು ಯಾರೋ ನಾನು ಯಾರೋ ? ಗೊತ್ತಾಯಿತೆ ? ನಾಳೆ ರಾತ್ರಿ ಇದೇ ಹೊತ್ತಿಗೆ ಬಾ" ಎಂದಳು ಪೂರ್ಣಮ್ಮ. ಕಳ್ಳ ಸರಿ ಎಂದು ಹೊರಟುಹೋದ.

ಬೆಳಗಾದಕೂಡಲೇ ಪೂರ್ಣಮ್ಮ ಗ್ರಾಮಾಧಿಕಾರಿಯ ಬಳಿಗೆ ಹೋದಳು. ಸಂಗತಿಗಳನ್ನೆಲ್ಲಾ ಅವನಿಗೆ ತಿಳಿಸಿ, ಕಳ್ಳನನ್ನು ತನ್ನ ಮನೆಯಲ್ಲಿ ಕಳವಿನ ಸೊತ್ತಿನೊಂದಿಗೆ ಹಿಡಿಯಲು ಏರ್ಪಾಡು ಮಾಡುವಂತೆ ಹೇಳಿಬಂದಳು.

ಆ ಕಳ್ಳ ಆಶಾ ಪಿಶಾಚಿಯ ಕೈಗೆ ಸಿಕ್ಕಿಬಿದ್ದು, ತಾನು ಬಹಳ ಕಾಲದಿಂದ ಸುತ್ತುಮುತ್ತಲೂ ಕಳವು ಮಾಡಿದ ನಗ, ನಗದಿ ಯಾವತ್ತೂ ತಂದು ಅರ್ಧರಾತ್ರಿಯ ಹೊತ್ತಿನಲ್ಲಿ ಪೂರ್ಣಮ್ಮನ ಮನೆಗೆ ಪ್ರವೇಶ ಮಾಡಿದನು. ಕೂಡಲೇ ಗ್ರಾಮಾಧಿಕಾರಿಯ ಬಂಟರು ಅವನನ್ನು ಹಿಡಿದು ಕಟ್ಟಿ ಗ್ರಾಮಾಧಿಕಾರಿಯ ಮುಂದೆ ತೆಗೆದುಕೊಂಡು ಹೋದರು.

ಮರುದಿನ ಗ್ರಾಮಾಧಿಕಾರಿ ಕಳ್ಳನ ಹತ್ತಿರ ದೊರಕಿದ ಸೊತ್ತುಗಳನ್ನೆಲ್ಲಾ ಪಟ್ಟಿಮಾಡಿಸಿ, ಯಾರು ಯಾರು ಯಾವು ಯಾವುದನ್ನು ಕಳೆದುಕೊಂಡಿದ್ದಾರೆಂದು ವಿಚಾರಿಸಿ, ಯಾರು ಯಾರದು ಅವರವರಿಗೆ ವಾಪಾಸು ಕೊಡಿಸಿದನು.

ಪೂರ್ಣಮ್ಮನಿಗೂ ಒಳ್ಳೆಯ ಬಹುಮಾನ ದೊರಕಿತು. ಆ ಕಳ್ಳನಿಗೆ ಜೈಲು ಶಿಕ್ಷೆ ಬಿದ್ದ ಮೇಲೆ ಊರಿನೊಳಗೆ ಎಲ್ಲಿಯೂ ಕಳುವುಗಳು ನಡೆಯಲಿಲ್ಲ.



# ವಿದೂಷಕನ ಪಂದ್ಯ

ಒಬ್ಬ ರಾಜನಿಗೆ ಕುದುರೇ ಪಂದ್ಯವೆಂದರೆ ಬಹಳ ಇಷ್ಟ. ಅವನು ಆಗಾಗ ಕುದುರೆಗಳನ್ನು ಓಡಿಸಿ ಎಲ್ಲಕ್ಕೂ ಮೊದಲು ಬರುವ ಕುದುರೆಗೆ ಬಹುಮಾನ ಕೊಡುವನು.

ಹೀಗಿರಲು ಒಂದುಸಾರಿ ವಿದೂಷಕನು ರಾಜನನ್ನು ಕುರಿತು, "ಈ ಸಾರಿ ಒಂದು ಹೊಸ ರೀತಿಯ ಬಹುಮಾನ ಇಡಿಸಿರಿ. ಎಲ್ಲಕ್ಕಿಂತ ಆಖೈರಿಗೆ ಬರುವ ಕುದುರೆಗೆ ಬಹುಮಾನ ಕೊಡಿರಿ. ಆ ಪಂದ್ಯ ನೋಡಲಿಕ್ಕೂ ಚೆನ್ನಾಗಿರುತ್ತದೆ" ಎಂದನು.

"ಕುದುರೆಗಳು ಓಡದಿದ್ದರೆ ನೋಡಲಿಕ್ಕೆ ಏನಿರುತ್ತದೆ?" ಎಂದ ರಾಜ.
"ಇಲ್ಲ ಮಹಾರಾಜರೆ, ಕುದುರೆಗಳು ಎಂದಿಗಿಂತಲೂ ಜೋರಾಗಿ ಓಡುವಂತೆ ಮಾಡುವ ಭಾರ ನನ್ನದು" ಎಂದ ವಿದೂಷಕ.

ರಾಜನು ಇಬ್ಬರು ರಾಹುತರನ್ನು ಕರೆದು ಅವರು ತಮ್ಮ ಕುದುರೆಗಳನ್ನು ಓಡಿಸಬೇಕೆಂದೂ, ಕಡೆಗೆ ಬಂದ ಕುದುರೆಗೆ ಬಹುಮಾನ ಕೊಡುವೆನೆಂದೂ ಹೇಳಿದ. ವಿದೂಷಕನು ಅವರ ಕಿವಿಯಲ್ಲಿ ಏನೋ ರಹಸ್ಯವಾಗಿ ಹೇಳಿ ಕಳುಹಿಸಿದ.

ಅವರು ಎರಡು ಕುದುರೆಗಳನ್ನು ಏರಿಕೊಂಡು ಬಂದರು. ಎರಡು ಕುದುರೆಗಳೂ ಶರವೇಗ ದಿಂದ ಓಡಿ, ಗಮ್ಯಸ್ಥಾನ ಮುಟ್ಟಿ ತಿರುಗಿ ಬರತೊಡಗಿದುವು. ರಾಜನು ಆಶ್ಚರ್ಯದಿಂದ ವಿದೂಷಕನ ಹತ್ತಿರ "ಅವರೊಡನೆ ಏನು ಹೇಳಿದಿ?" ಎಂದು ಕೇಳಲು, "ಮತ್ತೇನಿಲ್ಲ, ಕುದುರೆಗಳನ್ನು ಬದಲಾಯಿಸಿಕೊಳ್ಳಲು ಹೇಳಿದೆ" ಎಂದ ವಿದೂಷಕ






# ಮಜ್ಜಿಗೆಮಾಣಿ

ಒಂದು ಗ್ರಾಮದಲ್ಲಿ ಸಿರಿವಂತನಾದ ಒಬ್ಬ ರೈತನ ಕೈಕೆಳಗೆ ಅನೇಕ ಬಡರೈತರು ಕೂಲಿ ಕೆಲಸ ಮಾಡಿಕೊಂಡಿದ್ದರು. ಅವರಲ್ಲಿ ಒಬ್ಬನಿಗೆ ಒಬ್ಬ ಚುರುಕಾದ ಮಗನಿದ್ದ. ಅವನಲ್ಲಿ ಚುರುಕುತನದೊಂದಿಗೆ ಚಾಲಾಕಿತನವೂ ಸೇರಿತ್ತು. ಒಡೆಯನು ಬೆಣ್ಣೆ ತೆಗೆದ ಮಜ್ಜಿಗೆಯನ್ನು ಆ ಹುಡುಗನಿಗೆ ಕೊಡಿಸುತ್ತಿದ್ದ. ಅವನು ಆ ಮಜ್ಜಿಗೆಯನ್ನು ಶುಕ್ರವಾರದ ಸಂತೆಗೆ ತೆಗೆದುಕೊಂಡು ಹೋಗಿ ಮಾರಿ ಹಣ ಸಂಪಾದನೆ ಮಾಡುತ್ತಿದ್ದ. ಆ ಕಾರಣದಿಂದ ಎಲ್ಲರೂ ಅವನನ್ನು "ಮಜ್ಜಿಗೆ ಮಾಣಿ" ಎಂದು ಕರೆಯುತ್ತಿದ್ದರು. ಇದರಿಂದ ಅವನ ನಿಜವಾದ ಹೆಸರು ಯಾರಿಗೂ ಗೊತ್ತಿರಲಿಲ್ಲ.

ಪ್ರತಿ ಶುಕ್ರವಾರವೂ ವೀರಣ್ಣನೆಂಬವನು ಸಂತೆಗೆ ಗಾಡಿ ತೆಗೆದುಕೊಂಡು ಹೋಗುತ್ತಾನೆ. ಮಜ್ಜಿಗೆ ಮಾಣಿ ಆ ಗಾಡಿಯಲ್ಲಿಯೇ ತನ್ನ ಮಜ್ಜಿಗೆಯ ಕೊಡದೊಂದಿಗೆ ಸಂತೆಗೆ ಹೋಗಿ, ಮತ್ತೆ ಅದರಲ್ಲಿಯೇ ಹಿಂದಿರುಗಿ ಬರುತ್ತಿದ್ದ.

ಒಂದುದಿನ ಅವನು ಸಂತೆಯಲ್ಲಿ ಮಜ್ಜಿಗೆ ಮಾರುತ್ತಾ ಇರುವಾಗ, ಉದ್ದ ಆಕಾರದ ಮುದುಕಿಯೊಬ್ಬಳು "ಮಜ್ಜಿಗೆ ಹಾಕು ಮಾಣೀ" ಎಂದು ತನ್ನ ಕೈಯಲ್ಲಿದ್ದ ತಂಬಿಗೆಯನ್ನು ಮುಂದೆ ಹಿಡಿದಳು "ಲೋಟೆಗೆ ಒಂದು ದುಡ್ಡು. ಅರ್ಧ ಲೋಟೆಗೆ ಅರ್ಧ ದುಡ್ಡು. ಎಷ್ಟು ಹೊಯ್ಯಬೇಕು?" ಎಂದು ಕೇಳಿದ ಮಜ್ಜಿಗೆ ಮಾಣಿ.

"ದುಡ್ಡೂ ಇಲ್ಲ ಗೊಡ್ಡೂ ಇಲ್ಲ. ಸುಮ್ಮನೆ ಹಾಕೋ" ಎಂದಳು ಮುದುಕಿ.

"ಈ ಸುಮ್ಮನೆ ವ್ಯಾಪಾರ ನನ್ನ ಹತ್ತಿರ ಇಲ್ಲ ನಡಿ, ನಡಿಯವ್ವ" ಎಂದ ಮಜ್ಜಿಗೆ ಮಾಣಿ. ಮುದುಕಿ ಹೊರಟು ಹೋಗುವುದರ ಬದಲಿಗೆ ಹುಡುಗನ ಸಮೀಪಬಂದು ಮಜ್ಜಿಗೆಯ ಕೊಡದೊಳಗೆ ಕೈಹಾಕಲು ನೋಡಿದಳು. ಹುಡುಗನು ಮಜ್ಜಿಗೆ ಸೌಟಿನಿಂದ ಅವಳ ಕೈಯ ಮೇಲೆ ಗಟ್ಟಿಯಾಗಿ ಕುಟ್ಟಿದ. ಮುದುಕಿ ಮಾತಾಡದೆ ಹೊರಟು ಹೋದಳು;

ಸಾಯಂಕಾಲದ ಹೊತ್ತಿಗೆ ಮಜ್ಜಿಗೆ ಪೂರ್ತಿ ವ್ಯಾಪಾರವಾಗಿ ಹೋಯಿತು. ಮಾಣಿ ಗಡಿಗೆಯನ್ನೂ ಸೌಟನ್ನೂ ವೀರಣ್ಣನ ಗಾಡಿಯಲ್ಲಿಟ್ಟು "ನೀವು ಮುಂದೆ ಹೋಗಿ. ನಾನು ಸ್ವಲ್ಪ ಊರು ತಿರುಗಾಡಿ ನಡೆದು ಮನೆಗೆ ಬರುತ್ತೇನೆ" ಎಂದು ಹೇಳಿ ಅತ್ತ ತಿರುಗಿದನು. ಗಾಡಿ ಹೊರಟು ಹೋಯಿತು.

"ಸುಮಿತ್ರಾ ನಂದನ"



ಮಜ್ಜಿಗೆ ಮಾಣಿ ಸ್ವಲ್ಪ ಹೊತ್ತು ಊರು ಸುತ್ತಿ
ಮನೆಯದಾರಿ ಹಿಡಿದ. ಸ್ವಲ್ಪ ದೂರ ಹೋದಾಗ
ತನ್ನ ಹಿಂದೆ ಯಾರೋ ನಡೆದು ಬರುವಂತೆ ಅವನಿಗೆ
ಹಜ್ಜೆಗಳ ಸಪ್ಪಳ ಕೇಳಿಸಿತು. ಅವನು ಹಿಂದಕ್ಕೆ
ತಿರುಗಿ ನೋಡುವಷ್ಟರೊಳಗೆ ಅದೇ ಉದ್ದದ
ಮುದುಕಿ, ಅವನ ತಲೆಯ ಮೇಲೆ ಗೋಣೀಚೀಲ
ಕೌಚಿ ಹಾಕಿ, ಅವನೊಂದಿಗೇ ಆ ಗೋಣೀ ಚೀಲ
ವನ್ನೂ ಅವಲೀಲೆಯಿಂದ ತಲೆ ಕೆಳಗೆ ಮಾಡಿ, ಅದರ
ಬಾಯಿಗೆ ಹಗ್ಗ ಕಟ್ಟಿದಳು.

ಅಷ್ಟರಲ್ಲಿ ಮುದುಕಿಗೆ ಒಂದು ಮಾತು ನೆನಪಾ
ಯಿತು. ನಗರದಲ್ಲಿಯ ದೊಡ್ಡ ಮನೆಯೊಂದರ
ಅಡಿಗೆಯವಳು ಉಪ್ಪಿನಕಾಯಿ ಕೊಡುವೆನೆಂದಿದ್ದಳು.
ಅದು ನೆನಪಿಗೆ ಬರುತ್ತಲೇ ಮುದುಕಿಯ ನಾಲಗೆ
ಯಲ್ಲಿ ನೀರಿಳಿಯಿತು. ಅವಳು ಆ ಗೋಣೀ ಚೀಲ
ವನ್ನು ಕಾಲುದಾರಿಯ ಪಕ್ಕದಲ್ಲಿ ಬಿಟ್ಟು ಹಿಂದಿರುಗಿ
ಪಟ್ಟಣಕ್ಕೆ ಹೋದಳು.

ಮಜ್ಜಿಗೆಮಾಣಿ ಗೋಣೀ ಚೀಲದೊಳಗೆ ಸಿ
ಕೊಂಡು ಕಷ್ಟದಲ್ಲಿದ್ದ. ಆದರೆ ಅವನ ತಲೆ ಚುರುಕ
ಕೆಲಸ ಮಾಡಿಕೊಂಡೇ ಇತ್ತು. ಸ್ವಲ್ಪ ಹೊತ್ತಿ
ಯಾರೋ ಸಿಳ್ಳು ಹಾಕುತ್ತಾ ಆ ದಾರಿಯಾಗಿ ಬರು
ರುವ ಶಬ್ದ ಕೇಳಿಸಿತು. ಮಜ್ಜಿಗೆ ಮಾಣಿ "ಅಯ್
ನನ್ನನ್ನು ಇದರೊಳಗಿಂದ ಬಿಡಿಸಿ ಪುಣ್ಯ ಕಟ್ಟಿಕೊಳ್ಳಿ
ಎಂದು ಕೂಗಿದನು.

ಆ ಮನುಷ್ಯ ಗೋಣೀಚೀಲದ ಕಟ್ಟು ಬಿ
ಹುಡುಗನನ್ನು ಹೊರಗೆ ತೆಗೆದ. ಆ ಮನುಷ್ಯ ಒ
ಸೈನಿಕ ಉದ್ಯೋಗದವನು. ಅವನು ಹುಡು
ಹೇಳಿದ ವೃತ್ತಾಂತವನ್ನು ಕೇಳಿ, ಆ ದುಷ್ಟ ಮುದುಕಿ
ಬುದ್ಧಿ ಕಲಿಸಬೇಕೆಂದುಕೊಂಡು, ಗೋಣೀಚೀಲ
ತುಂಬಾ ಮುಳ್ಳು ಕಲ್ಲು ಮಣ್ಣು ತುಂಬಿಸಿ ಬಾ
ಕಟ್ಟಿದ. ತರುವಾಯ ಇಬ್ಬರೂ ಅವರವರ ದಾ
ಹಿಡಿದು ಹೊರಟು ಹೋದರು.

ಸ್ವಲ್ಪಹೊತ್ತಿಗೆ ಮುದುಕಿ ಬಂದು ಆ ಗೋಣ
ಚೀಲ ಹೊತ್ತುಕೊಂಡು ತನ್ನ ಮನೆಯ ದಾರಿ ಹಿ
ದಳು. ಗೋಣಿಯೊಳಗಿನ ಮುಳ್ಳು ಅವಳ ಬೆನ್ನ
ಚುಚ್ಚುತ್ತಾ ಇದ್ದಿತು.

"ಕಳ್ಳ ಮಗನೆ! ಸೂಜಿಯಿಂದ ಚುಚ್ಚುವಿಯಾ
ಮಾಡುತ್ತೇನೆ ನಿನಗೆ ತಕ್ಕದ್ದು!" ಎನ್ನುತ್ತಾ ಮುದು
ತನ್ನ ಮನೆಯನ್ನು ಮುಟ್ಟಿ, ಗೋಣೀಚೀಲ
ಬಾಯಿ ಬಿಚ್ಚಿ, ಅದರೊಳಗಿರುವುದನ್ನು ಕೆಳಗೆ ಸು
ದಳು. ಅವಳು ಹಾಸಿಗೆ ಪೂರಾ ಮುಳ್ಳು ಕ
ಗಳಿಂದ ಹಾಳಾಗಿ ಹೋಯಿತು.

ಮತ್ತೆ ಶುಕ್ರವಾರ ಬಂದಿತು. ಮಜ್ಜಿಗೆಮಾ
ವೀರಣ್ಣನ ಗಾಡಿಯಲ್ಲಿ ಸಂತೆಗೆ ಹೋಗಿ ಎಂದಿನ
ಮಜ್ಜಿಗೆಯನ್ನು ಮಾರಿದ. ಸಾಯಂಕಾಲ ಬೇರೆಲ್ಲಿಗ
ಹೋಗದೆ ವೀರಣ್ಣನ ಗಾಡಿಯಲ್ಲಿಯೇ ಮನ
ಹಿಂದಿರುಗಿದ. ಮಧ್ಯದಾರಿಯಲ್ಲಿ ಗಾಡಿಯ ಇರು
ಕೀಲು ಸ್ವಲ್ಪ ಒಡೆಯಿತು. "ನಾನು ನಗರ

ಹೋಗಿ ಕಮ್ಮಾರನ ಹತ್ತಿರ ಇನ್ನೊಂದು ಕೀಲು ಮಾಡಿಸಿಕೊಂಡು ಬರುತ್ತೇನೆ" ಎಂದು ಹೇಳಿ ವೀರಣ್ಣ ಹಿಂದಿರುಗಿ ಹೋದ. ಮಜ್ಜಿಗೆ ಮಾಣಿ ಗಾಡಿಯಲ್ಲೇ ಕುಳಿತಿರಲು ಬೇಸರವೆನಿಸಿ ಕೆಳಗಿಳಿದು ಅಚೀಚೆ ನಡೆದಾಡಿಕೊಂಡಿದ್ದ.

ಅಷ್ಟರಲ್ಲಿ ಮುದುಕಿ ಎಲ್ಲಿಂದಲೋ ಥಕ್ಕನೆ ಬಂದೂ ಆಯಿತು, ಅವನ ತಲೆಯ ಮೇಲೆ ಗೋಣೀ ಚೀಲದ ಮುಸುಕು ಹಾಕಿಯೂ ಆಯಿತು! ಮತ್ತೆ ಅವನನ್ನು ಬಂಧಿಸಿ ತನ್ನ ಮನೆಗೆ ಹೊತ್ತುಕೊಂಡು ಹೋದಳು ಆ ದುಷ್ಟ ಮುದುಕಿ.

ಮಧ್ಯ ದಾರಿಯಲ್ಲಿ ಮುದುಕಿಗೆ ಒಂದು ಹೊಸ ಆಲೋಚನೆ ಬಂತು. ಅವಳು ನಡೆಯುವ ದಾರಿಯಲ್ಲಿ ಒಂದು ತರಕಾರೀ ತೋಟವಿತ್ತು. ಅದರ ಸುತ್ತಲೂ ಬೇಲಿ ಇದ್ದಿತಾದರೂ, ಒಂದುಕಡೆಯಲ್ಲಿ ಒಬ್ಬ ಮನು ಷ್ಯನು ತೂರುವಷ್ಟು ಸಂದೂ ಇದ್ದಿತು. ಈ ಹೊತ್ತಿ ನಲ್ಲಿ ನುಗ್ಗಿದರೆ ಯಾರೂ ನೋಡುವಂತಿರಲಿಲ್ಲ. ಹೋಗಿ ಸ್ವಲ್ಪ ತರಕಾರಿ ಕಳವು ಮಾಡಿಕೊಂಡು ಬರೋಣವೆಂದುಕೊಂಡು ಮುದುಕಿ ಗೋಣೀ ಚೀಲದ ಗಂಟನ್ನು ಕೆಳಗಿಟ್ಟು ತೋಟದೊಳಗೆ ಹೊಕ್ಕಳು.

ಈ ದಾರಿಯಾಗಿ ಯಾರಾದರೂ ಬರುವರೇನೋ ಎಂದು ಗಮನಿಸಿಕೊಂಡಿದ್ದ ಮಜ್ಜಿಗೆ ಮಾಣಿಗೆ, ಯಾರೋ ಬೆಕ್ಕಿನ ಹಜ್ಜೆಯಿಂದ ನಡೆದುಕೊಂಡು ಬರುವಂತೆ ಭಾಸವಾಯಿತು. ಆ ಮನುಷ್ಯ ತನ್ನ ಹತ್ತಿರ ಬಂದನೆಂದು ತೋರಿದ ಕೂಡಲೇ, "ಅಯ್ಯೊ! ರಕ್ಷಿಸಿರಯ್ಯಾ!" ಎಂದು ಮೆಲ್ಲಗೆ ಕೂಗಿದ.

ಹಾಗೆ ಬಂದವನೊಬ್ಬ ಕಳ್ಳ. ಅವನು ಗೋಣೀ ಚೀಲದ ಬಾಯಿ ಬಿಚ್ಚಿ, ಹುಡುಗನನ್ನು ಬಿಡುಗಡೆ ಮಾಡಿ, ನಡೆದ ಸಂಗತಿಯನ್ನು ಕೇಳಿ ತಿಳಿದುಕೊಂಡ. ಮುದುಕಿಗೆ ತಕ್ಕ ಶಾಸ್ತಿ ಮಾಡಬೇಕೆಂದು ಆ ಕಳ್ಳ ಗೋಣೀಚೀಲ ತುಂಬಾ ಮೊನೆಯಾದ ಕಲ್ಲುಗಳನ್ನು ಒಟ್ಟೆ ಮಣ್ಣನೊಂದಿಗೆ ಕೂಡಿಸಿ ಚೀಲದೊಳಗೆ



ತುಂಬಿಸಿ ಬಾಯಿಬಿಗಿದ. ತರುವಾಯ ಇಬ್ಬರೂ ಅವರವರ ದಾರಿ ಹಿಡಿದು ಹೊರಟುಹೋದರು.

ಮುದುಕಿ ಸಾಧ್ಯವಿದ್ದಷ್ಟು ತರಕಾರಿಗಳನ್ನು ಕದ್ದು ಕೊಂಡು ಬಂದು ಗೋಣೀ ಚೀಲವನ್ನು ಎತ್ತಿ ಹೊತ್ತುಕೊಂಡು, "ಅಬ್ಬ ಪುಂಡ! ನನ್ನ ಮೊಣಕೈ ಮೊಣ ಕಾಲುಗಳನ್ನು ಹೀಗೆ ಚುಚ್ಚುತ್ತೀಯಾ? ಮಾಡುತ್ತೇನೆ ಎಲ್ಲಕ್ಕೂ ಸೇರಿಸಿ" ಎಂದು ಗೊಣ ಗುತ್ತಾ ಮನೆಗೆ ಹೋಗಿ ಹಾಸಿಗೆಯ ಮೇಲೆ ಆ ಚೀಲ ದೊಳಗಿರುವುದನ್ನು ಸುರಿದಳು. ತಾನು ಮತ್ತೆ ಮೋಸ ಹೋದೆನೆಂದು ತಿಳಿದು ಹಲ್ಲು ಕಚ್ಚಿದಳು.

ಮತ್ತೊಂದು ಶುಕ್ರವಾರವು ಬಂದಿತು. ಈಸಾರಿ ವೀರಣ್ಣ ಸಂತೆ ಮುಗಿಸಿ ಸ್ವಲ್ಪ ಬಿಸಿಲಿರುವಾಗಲೇ ಮನೆಗೆ ಹೊರಟ. ಮಜ್ಜಿಗೆ ಮಾಣಿ ಕೂಡಾ ಬಹಳ ಜಾಗರೂಕನಾಗಿದ್ದ. ದುಷ್ಟ ಮುದುಕಿಯ ಕೈ ತಾಗಿದ ಕೂಡಲೇ ತಿವಿದುಬಿಡಲಿಕ್ಕಾಗಿ ತನ್ನ ಕೈಯಲ್ಲಿ ಚೂರಿ ಯೊಂದನ್ನು ಹಿಡಿದುಕೊಂಡಿದ್ದ. ಹೀಗೆ ಗಾಡಿ

ಯಲ್ಲಿ ಹಿಂದಿರುಗುತ್ತಿದ್ದಾಗ ಹುಣಿಸೇ ತೋಪಿನ ಹತ್ತಿರ ವೀರಣ್ಣ ಗಾಡಿಯನ್ನು ನಿಲ್ಲಿಸಿ, "ಲೋ, ಸ್ವಲ್ಪ ಹುಣಿಸೇ ಚಿಗುರು ಕೊಯ್ದುಕೊಳ್ಳೋಣ" ಎಂದು ಗಾಡಿಯಿಂದ ಕೆಳಗಿಳಿದ.

ಇನ್ನೂ ಕತ್ತಲೆಯಾಗಿರಲಿಲ್ಲ. ಕೈಯಲ್ಲಿ ಚೂರಿ ಇರುವುದರಿಂದ ಹುಡುಗನೂ ಧೈರ್ಯವಾಗಿದ್ದ. ಇಬ್ಬರೂ ತೋಪಿನ ಒಂದೊಂದು ಭಾಗಕ್ಕೆ ಹೋಗಿ ಹುಣಿಸೇ ಚಿಗುರು ಮುರಿಯತೊಡಗಿದರು. ಆಗ ಆ ದುಷ್ಟ ಮುದುಕಿ ಯಾವ ಮರೆಯಲ್ಲಿದ್ದಳೋ, ಥಕ್ಕನೆ ಹುಡುಗನ ಬಾಯಿಯ ಮೇಲೆ ಕೈಯಿಟ್ಟು, ಕೂಗದಂತೆ ಬಾಯಿಯೊಳಗೆ ಬಟ್ಟೆ ತುರುಕಿ, ಗೋಣೀ ಚೀಲದೊಳಗೆ ಅವನನ್ನು ಇಟ್ಟು ಕಟ್ಟಿ ತನ್ನ ಮನೆಗೆ ಹೊತ್ತುಕೊಂಡು ಹೋದಳು.

ಅವಳು ಒಂದು ಮೂಲೆಯಲ್ಲಿ ಚೀಲವನ್ನಿಟ್ಟು, ಒಂದು ಕತ್ತಿಯನ್ನು ತೆಗೆದು ಕಲ್ಲಿನಲ್ಲಿ ತೀಡುತ್ತಾ ಕುಳಿತಳು. ಆಗ ಒಲೆಯಲ್ಲಿ ಬೆಂಕಿ ನಂದಿಹೋದುದನ್ನು ನೋಡಿದಳು. ಇನ್ನೂ ಒಲೆಯ ಮೇಲಿದ್ದ ಗಡಿಗೆಯ ಎಸರು ಕುದಿಯಲಿಲ್ಲ. ಬೆಂಕಿಗೆ ಇನ್ನಿಷ್ಟು ಉರುವಲು ಬೇಗನೇ ಹಾಕದೆ ಹೋದರೆ ಬೆಂಕಿ ಪೂರಾ ಆರಿಹೋಗುವ ಹಾಗಿತ್ತು. ಮನೆಯಲ್ಲಿ ಒಲೆಗೆ ಹಾಕಲು ಯಾವುದೂ ಕಾಣಿಸಲಿಲ್ಲ. ಅವಳು ಒಂದು ಪಗ್ಗ ತೆಗೆದುಕೊಂಡು ಒಣ ಪುರುಳೆಗಳನ್ನು ಆರಿಸಿ ಕೊಂಡು ಬರಲು ಬೇಗಬೇಗನೆ ಹೊರಗೆ ಹೋದ ಬಾಗಿಲು ಮುಚ್ಚಿದ ಶಬ್ದ ಕೇಳಿದ ಕೂಡ ಮಜ್ಜಿಗೆ ಮಾಣಿ ಗೋಣಿಚೀಲದ ಅಡಿಭಾಗ ಹೊಲಿಗೆಯನ್ನು ಕೊಯ್ದು ಹೊರಗೆ ಬಂದ. ಮ ಯೊಳಗೆ ಆ ಮುದುಕಿಯ ಗಡಿಗೆಗಳು, ಮಡಕೆಗಳ ಮಣೆಗಳು, ಬಾಣಾಲಿ, ಮುಂತಾದ ಸಾಮಾ ಗಳಿದ್ದುವು. ಹುಡುಗನು ಗೋಣಿಯೊಳಗೆ ಅವುಗಳನ ತುಂಬಿಸಿ ಕಟ್ಟಿ ಮೊದಲಿನಂತೆಯೇ ಇಟ್ಟು, ಬಾಗಿ ತೆರೆದ. ಒಲೆಯ ಬೆಂಕಿಯನ್ನು ಗುಡಿಸಲಿನ ಮೂ ಯಲ್ಲಿ ಹಾಕಿ, ಅದರ ಮೇಲೆ ಕಸನೊಕ್ಕೆಗಳನ್ನಿಟ ನೆಟ್ಟಗೆ ತನ್ನ ಮನೆಗೆ ಹೋದ.

ಮುದುಕಿ ಬೇಗನೇ ತಿರುಗಿಬಂದು ಗುಡಿಸಲಿ ಬಾಗಿಲು ಮುಚ್ಚಿ ತಾಳ ಜಡಿದು, ಒಲೆಗೆ ಪುರು ಗಳನ್ನು ಒಟ್ಟಿ ಬೆಂಕಿ ಊದಿ ಹಚ್ಚಿಸಿದಳು. ಆಮೇ ತೀಡಿದ ಕತ್ತಿಯನ್ನು ತೆಗೆದುಕೊಂಡು "ಇನ್ನೆಲ್ಲಿ ಹೋಗುವಿಯೋ ?" ಎನ್ನುತ್ತಾ ಗೋಣೀ ಚೀ ವನ್ನು ಬಿಚ್ಚಿ ಕೌಚಿ ಹಾಕಿದಳು. ಅದರೊಳಗಿ ಸಾಮಾನುಗಳೆಲ್ಲಾ ದೊಡ್ಡ ಶಬ್ದದಿಂದ ಬಿದ್ದು ಹ ಡಲು, ಮುದುಕಿಗೆ ಗಡಿಬಿಡಿಯಿಂದ ತನ್ನ ಮನೆ ಬೆಂಕಿ ಹತ್ತಿಕೊಂಡದ್ದೂ ಗೊತ್ತಾಗಲಿಲ್ಲ. ಗೊತ್ತಾದಾ ಹೊರಗೆಬರಲು ಸಾಧ್ಯವಾಗದೆ ಆ ಗುಡಿಸಲಿನೊಂದಿ ಸುಟ್ಟುಹೋದಳು.





# ಮಹಾಭಾರತ

"ಬೀಸುವ ದೊಣ್ಣೆಯ ಏಟು ತಪ್ಪಿದರೆ ಸಾವಿರ ವರ್ಷಗಳಾಯುಸ್ಸು" ಎಂಬ ಗಾದೆಯ ಅನುಭವ ದುರ್ಯೋಧನನಿಗಾಯಿತು. ಅವನು ಜೀವದಿಂದ ಬದುಕಿ ಹೊರಬಿದ್ದನು ನಿಜ; ಆದರೆ ಅವನಿಗೆ ತಲೆ ಎತ್ತಲಾಗದಂತಹ ಅವಮಾನವಾಗಿತ್ತು. ತನ್ನವರೊಂದಿಗೆ ಕೂಡಿಕೊಂಡು, ಸಹಿಸಲಸಾಧ್ಯವಾದ ಅವಮಾನದಿಂದ ಕುತಕುತನೆ ಕುದಿಯುತ್ತ, ಹಸ್ತಿನಾಪುರಕ್ಕೆ ಹಿಂದಿರುಗುತ್ತಿರುವಾಗ, ದಾರಿಯಲ್ಲಿ ಒಂದು ಕೆರೆಯ ಹತ್ತಿರ ಬಿಡದಿ ಇಳಿಸಿ ತಂಗಿದನು.

ಗಂಧರ್ವರನ್ನು ಅಡ್ಡಗಟ್ಟಿ ಯುದ್ಧ ಮಾಡುತ್ತ ಸೋತು ಓಡಿಹೋದ ಕರ್ಣನು, ದುರ್ಯೋಧನನು ಬಿಡದಿ ಇಳಿಸಿದ ಸ್ಥಳಕ್ಕೆ ಬಂದನು, ದುರ್ಯೋಧನನನ್ನು ಕಂಡನು. ನಡೆದ ಸಂಗತಿಗಳನ್ನು ಅರಿಯದ ಕರ್ಣನು ದುರ್ಯೋಧನನನ್ನು ನೋಡಿ, "ದುರ್ಯೋಧನಾ, ನಿನ್ನ ಪರಾಕ್ರಮವನ್ನು ಏನೆಂದು ಹೇಳಲಿ? ಆ ಗಂಧರ್ವರನ್ನು ಜಯಿಸಿ ಹಿಂದಿರುಗುತ್ತಿರುವೆ! ಮೆಚ್ಚತಕ್ಕಂಥ ಪೌರುಷ ನಿನಗಿದೆ. ಏಕೆಂದರೆ ಆ ಗಂಧರ್ವರು ಬಹಳ ಉದ್ದಂಡರು. ನಾನು ಅವರ ಧಾಳಿಗೆ ತಡೆಯಲಾರದೆ ವಿಕರ್ಣನ ರಥದ ಮೇಲೇರಿ ಓಡಿಹೋಗಿ ಎಲ್ಲಿಯೋ ಅಡಗಿದ್ದು, ಈಗ ನೀನು ಹಿಂದಿರುಗುವುದನ್ನು ನೋಡಿ ಬಂದಿದ್ದೇನೆ. ಅಂಥಾ ಗಂಧರ್ವರನ್ನು ಗೆದ್ದಿರುವ ನಿನ್ನಂತಹ ಶೂರನು ಪ್ರಪಂಚದಲ್ಲಿ ಇನ್ನೊಬ್ಬನಿಲ್ಲ" ಎಂದನು.

ಕರ್ಣನು ಹೀಗೆ ಮೆಚ್ಚುಗೆಯ ಮಾತುಗಳನ್ನು ಹೇಳುವಾಗ, ದುರ್ಯೋಧನನಿಗೆ ದುಃಖವು ಉಕ್ಕುಕ್ಕಿ ಬರುತ್ತಿದ್ದಿತು. ಅವನು ನಡುಗುವ ಕಂಠದಿಂದ ನಡೆದ ಸಮಾಚಾರಗಳನ್ನೆಲ್ಲಾ ಕರ್ಣನಿಗೆ ಹೇಳಿ, "ನಾನು ಯುದ್ಧದಲ್ಲಿ ಗೆಲ್ಲುತ್ತಿದ್ದರೆ ಕೀರ್ತಿ ಬರುತ್ತಿತ್ತು; ಸತ್ತಿದ್ದರೆ ವೀರಸ್ವರ್ಗ ಸಿಗುತ್ತಿತ್ತು. ಎರಡೂ ಇಲ್ಲದೆ ಹೋಯಿತು. ಸಂಪೂರ್ಣ ಕೆಟ್ಟೆ. ಈ ಅವಮಾನವನ್ನು ಹೊತ್ತುಕೊಂಡು ಹಸ್ತಿನಾಪುರಕ್ಕೆ ಬರಲಾರೆನಪ್ಪಾ, ಬರಲಾರೆ. ನನ್ನ ತಂದೆಗೂ, ದ್ರೋಣ, ಕೃಪಾಶ್ವತ್ಥಾಮರಿಗೂ ನನ್ನ ಈ ಮುಖವನ್ನು ತೋರಿಸಲಾರೆ. ಅವರೊಂದಿಗೆ ಇಲ್ಲಿ ನಡೆದುದನ್ನು

೩೪. ಕರ್ಣನ ದಿಗ್ವಿಜಯ



ಹೇಳಲಾರೆ. ಆದರೂ ಅವರಿಗೆ ಇಲ್ಲಿ ನಡೆದುದು ಗೊತ್ತಾಗಿ ತೀರುತ್ತದೆ. ನನಗಿನ್ನು ಜೀವಿತವೇ ಇಲ್ಲ, ಬೇಡ. ಎಲ್ಲದರ ಮೇಲೆಯೂ ನನಗೆ ವಿರಕ್ತಿ ಹುಟ್ಟಿದೆ. ಸತ್ತುಹೋಗುತ್ತೇನೆ. ನಾನಿಲ್ಲಿಯೇ ಪ್ರಾಯೋಪವೇಶ ವ್ರತವನ್ನು ಕೈಕೊಳ್ಳುತ್ತೇನೆ. ನೀವೆಲ್ಲರೂ ಹಸ್ತಿನಾಪುರಕ್ಕೆ ಹೋಗಿಬಿಡಿ. ದುಶ್ಶಾಸನನಿಗೆ ಪಟ್ಟವನ್ನು ಕಟ್ಟಿ, ನೀವೆಲ್ಲರೂ ಅವನಿಗೆ ಸಹಾಯಕರಾಗಿದ್ದು ರಾಜ್ಯವನ್ನು ಆಳಿಸಿರಿ" ಎಂದು ಹೇಳಿ ತಮ್ಮನನ್ನು ಆಲಿಂಗಿಸಿಕೊಂಡನು. ಇಬ್ಬರೂ ಅತ್ತರು.

ಕರ್ಣನು ಅವರ ರೋದನವನ್ನು ಕೇಳಿ ಸಿಡುಕುಗೊಂಡು, "ನೀವಿಬ್ಬರೂ ಹೀಗೆ ಅಳುವಷ್ಟು ಏನಾಯಿತು? ಏತಕ್ಕಾಗಿ ಇಷ್ಟೊಂದು ರೋದನ? ರೋದಿಸಿದಷ್ಟೂ ಹೆಚ್ಚು ಹೆಚ್ಚು ರೋದನವೇ ಹೊರತು ಮನಸ್ಸಿಗೆ ಶಾಂತಿ ಬರಲಾರದು. ಪಾಂಡವರು ನಿನ್ನನ್ನು ಗಂಧರ್ವರಿಂದ ಬಿಡಿಸಿದುದಕ್ಕೆ ನೀನೇಕೆ ಇಷ್ಟು ದುಃಖಿಸಬೇಕು? ನಿನ್ನ ಕಿಂಕರರು ಮಾಡಬೇಕಾದ ಕೆಲಸವನ್ನೇ ಅವರು ಮಾಡಿದ್ದಾರೆ. ಇದು ಅವಮಾನವೇನಿದೆ? ನೀನು ಹೀಗೆ ಸಾಯ... ಸಿದ್ಧನಾದ ಸಂಗತಿ ನಿನ್ನ ಸಾಮಂತರಿಗೆ ತಿಳಿ... ನಿನ್ನನ್ನು ಹೇಡಿಗಳ ಲೆಕ್ಕದಲ್ಲಿ ಸೇರಿಸಿಬಿಡಲಾರ... ಪಾಂಡವರ ಸರ್ವಸ್ವವನ್ನೂ ನೀನು ಎಳೆದುಕೊಂ... ದಕ್ಕಾಗಿ ಅವರು ಸತ್ತರೇನು? ಇಂತಹ ಹುಚ... ಆಲೋಚನೆ ಬಿಟ್ಟುಬಿಡು" ಎಂದನು.

ಆಗ ಶಕುನಿ ದುರ್ಯೋಧನನನ್ನು ನೋ... "ನಾನು ನಿನಗೆ ಜೂಜಾಟದಲ್ಲಿ ಪಾಂಡವರ ಸರ್ವ... ವನ್ನೂ ಗೆಲಿಸಿ ಕೊಟ್ಟಿದ್ದು ನೀನು ಅನುಭವಿಸಬೇಕೆಂ... ಶಾನೆ? ಈ ಅಲ್ಪ ವಿಷಯಕ್ಕೆ ಪ್ರಾಯೋಪವೇ... ಮಾಡುತ್ತೇನೆನ್ನುವುದು ಸರಿಯೆ?"

ಆದರೆ ದುರ್ಯೋಧನನು ಯಾರ ಮಾತನ್ನು ಕೇಳಲಿಲ್ಲ. ಅವನು "ದರ್ಭೆಗಳನ್ನು ಹರಿದು ತಂ... ನೆಲದಲ್ಲಿ ಹರಡಿ ನಾರು ಬಟ್ಟೆಯನ್ನುಟ್ಟುಕೊಂ... ಪ್ರಾಯೋಪವೇಶ ವ್ರತ ಹಿಡಿದು ಮಲಗಿದನು. ... ಸ್ಥಿತಿಯಲ್ಲಿರುವಾಗ ಬೇರೆ ಯಾರಿಗೂ ತಿಳಿಯದಂತೆ ಒಂದು ಸಂಗತಿ ನಡೆಯಿತು. ದೇವತೆಗಳೊಂದಿ... ಯುದ್ಧಮಾಡಿ ಸೋತು, ಪಾತಾಳದಲ್ಲಿ ಅಡಗಿರು... ದಾನವರಿಗೆ ದುರ್ಯೋಧನನ .. ಪ್ರಾಯೋಪವೇ... ವ್ರತದ ಸಂಗತಿ ತಿಳಿಯಿತು. ಅವರು ದುರ್ಯೋಧ... ನನ್ನು ತಮ್ಮ ಬಳಿಗೆ ತರಿಸಿಕೊಳ್ಳಲು, ಒಂದು ಹೋ... ಮಾಡುತ್ತ, ಅಥರ್ವಣವೇದ ಮಂತ್ರಗಳನ್ನು ... ಸುತ್ತ ಹಾಲನ್ನು ಹೋಮಿಸಿ ಆಹುತಿಗಳ... ಕೊಟ್ಟರು. ಆಗ ಆ ಅಗ್ನಿ ಮಧ್ಯದಿಂದ ಕೃತ್ಯ ಎಂ... ಶಕ್ತಿಯೊಬ್ಬಳು ಎದ್ದು ಬಂದು ಆಕಳಿಸುತ್ತ ದಾನವ... ಮುಂದೆ ನಿಂತು "ನನ್ನಿಂದ ನಿಮಗೇನಾಗಬೇಕು?" ಎಂದು ಕೇಳಿದಳು.

"ಭೂಲೋಕದಲ್ಲಿ ದುರ್ಯೋಧನನು ಪ್ರಾಯೋ... ವೇಶ ವ್ರತ ಹಿಡಿದು ಮಲಗಿದ್ದಾನೆ. ಅವನನ್ನು ... ಪಾತಾಳಕ್ಕೆ ನಮ್ಮ ಹತ್ತಿರ ತೆಗೆದುಕೊಂಡು ಬಾ...

ಶರು ದಾನವರು. ಅದರಂತೆ ಕೃತ್ಯಳು ದುರ್ಯೋ
ನನ್ನು ಪಾತಾಳಕ್ಕೆ ತಂದಳು.

ದಾನವರು ದುರ್ಯೋಧನನನ್ನು ಆದರಿಸಿ ಆ
ಪೂರಾ ತಮ್ಮ ಬಳಿಯಲ್ಲೇ ಅವನನ್ನು ಇಟ್ಟು
ಡು ಅನೇಕ ಮಾತುಕತೆಗಳನ್ನಾಡಿ, ಅವನ ಮನ
ಹರ್ಷ ತರುತ್ತ "ಎಷ್ಟಾದರೂ ದುರ್ಯೋ
ನಿನ್ನ ಶೂರತನ ಹೇಗಾದರೂ ಇರಲಾರದೇಕೆ?
ಸಾಮಂತರೆಲ್ಲಾ ಮಹಾಶೂರರು. ನೀನು ಕೂಡಾ
ಮ ಕ್ಷತ್ರಿಯನು. ಕ್ಷತ್ರಿಯ ಧರ್ಮವನ್ನು
ಬಲಹೀನನಂತೆ ಪ್ರಾಯೋಪವೇಶ ಮಾಡುವು
? ಇದರಿಂದ ನಿನಗೆ ಆತ್ಮಹತ್ಯ ಮಾಡಿ
ಂತಹ ಪಾಪದ ಹೊರತು ಮತ್ತೇನೂ ಬರುವು
ಸುಖವೂ ಇಲ್ಲ, ಕೀರ್ತಿಯೂ ಇಲ್ಲ. ಇದನ್ನು
ನಿನ್ನ ಶತ್ರುಗಳು ಮಾತ್ರ ಸಂತೋಷಿಸುತ್ತಾರೆ.
ವನ್ನು ಹೇಳುತ್ತೇವೆ, ಕೇಳು. ಈಶ್ವರನಿಂದ ವರ
ದು ವಜ್ರಸಮಾನವಾದ ನಿನ್ನ ಶರೀರದ ಮೇಲು
ವನ್ನೂ, ಲೋಕಮಾತೆಯ ವರವನ್ನು ಪಡೆದು
ವಾದ ನಿನ್ನ ಶರೀರದ ಕೆಳಭಾಗವನ್ನೂ ನಾವೇ
ಮಾಡಿದ್ದೇವೆ. ನೀನು ಸಾಧಾರಣ ಮಾನವ
ಅಲ್ಲ. ದೇವತಾಮೂರ್ತಿ ನೀನು. ಯುದ್ಧ
ನಿನ್ನ ಪಕ್ಷದಲ್ಲಿದ್ದು ಹೋರಾಡಿ ನಿನ್ನ ಶತ್ರು
ಲ್ಲ ವಧಿಸಲಿರುವ ಎಲ್ಲರೂ ನಮ್ಮ ಅಂಶಗಳಿಂದ
ದವರೆಂದು ನಂಬು. ನಿನ್ನ ಸ್ನೇಹಿತನಾದ
ನು ನರಕಾಸುರನ ಅಂಶದಿಂದ ಕೂಡಿದವನು.
ದರಿಂದ ನೀನು ಸ್ವಲ್ಪ ಕೂಡಾ ಚಿಂತಿಸಬೇಕಾದ
ವೇ ಇಲ್ಲ" ಎಂದು ಅವನ ಮನಸ್ಸಿಗೆ ಸಮಾ
ವನ್ನೂ, ಧೈರ್ಯವನ್ನೂ ತುಂಬಿಸಿ ಕಳುಹಿಸಿ
ರು. ಕೃತ್ಯ ಅವನನ್ನು ಮತ್ತೆ ಭೂಲೋಕಕ್ಕೆ
ಮಲಗಿಸಿ ಅದೃಶ್ಯಳಾದಳು.

ಬೆಳಗಾದಾಗ ದುರ್ಯೋಧನನು ನಿದ್ರೆಯಿಂದೆದ್ದು
ನಡೆದುದೆಲ್ಲವೂ ಸ್ವಪ್ನವೆಂದುಕೊಂಡನು.



ಆದರೆ ಅದನ್ನು ಕುರಿತು ಅವನು ಯಾರಿಗೂ ಹೇಳ
ಲಿಲ್ಲ. ಈಸಾರಿ ಕರ್ಣನು ಸುಲಭದಲ್ಲಿಯೇ ಅವನನ್ನು
ಪ್ರಾಯೋಪವೇಶದಿಂದ ಬಿಡುಗಡೆ ಮಾಡಿಸಿದನು.
ಆಮೇಲೆ ದುರ್ಯೋಧನನು ತನ್ನ ಪರಿವಾರ
ದೊಂದಿಗೆ ಹಸ್ತಿನಾಪುರವನ್ನು ಪ್ರವೇಶಿಸಿದನು.

ತುಂಬಿದ ಮಹಾಸಭೆಯಲ್ಲಿ ಭೀಷ್ಮನು ದುರ್ಯೋ
ಧನನೊಂದಿಗೆ ಹೀಗೆಂದನು: "ದುರ್ಯೋಧನಾ,
ನೀನು ಬೇಡವೆಂದರೂ ಕೇಳದೆ ಘೋಷಯಾತ್ರೆಗೆಂದು
ಅರಣ್ಯಕ್ಕೆ ಹೋಗಿ ಪರಾಭವ ಹೊಂದಿರುವೆ. ಧರ್ಮ
ರಾಜನು ನಿನ್ನ ಮಾನವನ್ನು ಕಾಪಾಡಿ, ನಿನ್ನ ಮೇಲೆ
ಬಹಳ ಉದಾರತೆಯನ್ನು ತೋರಿಸಿದ್ದಾನೆ. ಕರ್ಣನ
ಮಾತುಗಳನ್ನು ನಂಬಿ ನೀನು ಅಂತಹವರೊಂದಿಗೆ
ಹಗೆಯನ್ನು ಬೆಳೆಯಿಸುತ್ತಿರುವೆ. ನೀನು ಸ್ನೇಹಿತ
ನೆಂದುಕೊಂಡಿರುವ ಈ ಕರ್ಣನು ನಿನ್ನನ್ನು ಗಂಧರ್ವರ
ವಶಕ್ಕೆ ಬಿಟ್ಟು, ತಲೆತಪ್ಪಿಸಿಕೊಂಡು ಯುದ್ಧರಂಗದಿಂದ
ಓಡಿಹೋದ. ಇದನ್ನೆಲ್ಲ ತಿಳಿದುಕೊಂಡು ಈಗಾದರೂ



ಒಳ್ಳೆಯ ಬುದ್ಧಿಯಿಂದ ಪಾಂಡವರೊಂದಿಗೆ ಸ್ನೇಹ ಮಾಡಿಕೊಂಡು ವಂಶವನ್ನು ಕಾಪಾಡು "

ಭೀಷ್ಮನ ಮಾತನ್ನು ಕೇಳಿ ದುರ್ಯೋಧನನು ಗಹ ಗಹನೆ ನಕ್ಕು, ಕರ್ಣ ಶಕುನಿ ದುಶ್ಶಾಸನರೊಡನೆ ಸಭೆ ಯಿಂದೆದ್ದು ಹೊರಟುಹೋದನು. ಆದರೆ ಭೀಷ್ಮನು ಹೇಳಿದ ಮಾತು ಕರ್ಣನಿಗೆ ಬಹಳವಾಗಿ ನಾಟಿ, ಅವನಿಗೆ ಅವಮಾನವನ್ನುಂಟುಮಾಡಿತು. ಅವನು ದುರ್ಯೋಧನನೊಂದಿಗೆ, "ರಾಜಾ, ಭೀಷ್ಮನಂಥ ವೃದ್ಧನ ಮಾತನ್ನು ಬಿಡು. ನನಗೆ ಸೇನೆಗಳನ್ನು ಕೊಡು. ಭೀಮಾರ್ಜುನ ನಕುಲ ಸಹದೇವರು ನಾಲ್ವರೂ ಕೂಡಿ ಜಯಿಸಿದ ದೇಶಗಳನ್ನೆಲ್ಲಾ ನಾನೊಬ್ಬನೇ ಜಯಿಸಿ ನಿನಗೆ ಕೊಡುತ್ತೇನೆ. ಆಗ ಈ ಮುದುಕ ಭೀಷ್ಮ ನನ್ನನ್ನು ಇಷ್ಟೊಂದು ಹಗುರಾಗಿ ನೋಡಲಾರ" ಎಂದನು. ದುರ್ಯೋಧನನು ಕರ್ಣನ ಕೋರಿಕೆಯಂತೆಯೇ ನಡೆಯಿಸಿದನು. ಆಗ ಕರ್ಣನು ಸೇನೆಯೊಂದಿಗೆ ಸಂತೃಪ್ತಿಯಿಂದ ಹೊರಟು, ಮೊತ್ತ ಮೊದಲು ದ್ರುಪದನನ್ನೇ ಯುದ್ಧದಲ್ಲಿ ಸೆ ಸಿದನು. ಅವನು ದ್ರುಪದ ರಾಜನಿಂದ ಹೇರಳ ವನ್ನು ಕೊಂಡುಕೊಂಡು, ಅಲ್ಲಿಂದ ಉತ್ತರ ಹೊರಟು, ಅಂಗ, ವಂಗ, ಕಳಿಂಗ, ಮಗಧ, ಮ ಕೋಸಲ ಮೊದಲಾದ ದೇಶಗಳ ರಾಜ ಸೋಲಿಸಿ ಎಲ್ಲರಿಂದಲೂ ಕಪ್ಪಗಳನ್ನು ತೆ ಕೊಂಡನು. ತರುವಾಯ ಕರ್ಣನು ದಕ್ಷಿಣ ದೇ ಮೇಲೆಯೂ ಜೈತ್ರಯಾತ್ರೆ ಮಾಡಿ ಅನೇಕ ಮ ರಾಜರನ್ನು ಸೋಲಿಸಿದನು. ಕುಂಡಿನ ನಗರದ ನಾದ ರುಕ್ಮಿಯಂತಹ ಕೆಲಮಂದಿ ರಾಜರು ನೊಂದಿಗೆ ಯುದ್ಧಮಾಡದೆ ಸ್ನೇಹ ಮಾಡಿ ಹೀಗೆ ದಿಗ್ವಿಜಯ ಮಾಡಿ, ದೊರಕಿದ ಹೇರಳ ರಾಶಿಯೊಂದಿಗೆ ಕರ್ಣನು ಸ್ವಲ್ಪಕಾಲದೊಳಗೇ ದಿಗ್ವಿಜಯವನ್ನು ಮುಗಿಸಿ ಹಸ್ತಿನಾವತಿಗೆ ಹಿಂದಿ ಬಂದು ಎಲ್ಲವನ್ನೂ ದುರ್ಯೋಧನನಿಗೆ ಒಪ್ಪಿಸಿ

ದುರ್ಯೋಧನನು ಕರ್ಣನನ್ನು ಅಭಿನಂದಿಸ "ಭೀಷ್ಮ, ದ್ರೋಣ, ಬಾಹ್ಲೀಕ ಮೊದಲಾದ ವೀ ವೀರರು ಎಷ್ಟುಮಂದಿ ಇದ್ದರೂ ಸಹ ನೀನು ಮ ದಷ್ಟು ಸಹಾಯವನ್ನು ನನಗೆ ಯಾರೂ ಮಾಡ ನಿನಗೆ ಸಮಾನರು ಯಾರೂ ಇಲ್ಲ" ಎಂದನು.

ಕರ್ಣನು ದಿಗ್ವಿಜಯ ಮಾಡಿ ಬಂದುದ ತಾನು ಕೂಡಾ ರಾಜಸೂಯಯಾಗ ಮಾಡಬೇ ಬುದ್ಧಿ ದುರ್ಯೋಧನನಿಗೆ ಬಂದಿತು. ಅದಕ್ಕೆ ಬೇ ಏರ್ಪಾಡುಗಳನ್ನು ತಯಾರಿಸುತ್ತ ಋತ್ವಿಜ ಕರೆಸಿ ತನ್ನಿಂದ ರಾಜಸೂಯಯಾಗ ಮಾಡಿಸಬೇಕ ಅವರನ್ನು ಕೇಳಿಕೊಂಡನು.

ಆದರೆ ಋತ್ವಿಜರು ಅದಕ್ಕೆ ಅಭ್ಯಂತರ ಹೇಳಿದರು. "ಪಾಂಡವರನ್ನು ಕೂಡಾ ಜಯಿ ಹೊರತು ರಾಜಸೂಯ ಮಾಡಲು ಸಾಧ್ಯ ಅದಲ್ಲದೆ ನಿನ್ನ ತಂದೆಯೂ ಬದುಕಿದ್ದಾರೆ. ಈ ಯಲ್ಲಿ ನಿನಗೆ ಚಕ್ರವರ್ತಿಯಾಗುವ ಅರ್ಹತೆ

ಜ್ಞ. ಆದರೆ ರಾಜಸೂಯಕ್ಕೆ ಸಮಾನವಾದ ವೈಷ್ಣವ ಯಜ್ಞವೆಂಬ ಮತ್ತೊಂದು ಯಜ್ಞವಿದೆ. ಬೇಕಾದರೆ ಯಜ್ಞ ಮಾಡಬಹುದು" ಎಂದರು.

ದುರ್ಯೋಧನನು ಈ ಸಂಗತಿಯನ್ನು ತನ್ನ ತಮ್ಮಂದಿರೊಂದಿಗೂ ಕರ್ಣ ಶಕುನಿಗಳೊಂದಿಗೂ ಹೇಳಿದಾಗ, ಋತ್ವಿಜರು ಹೇಳಿದ ಹಾಗೆ ಮಾಡುವುದೇ ಒಳ್ಳೆಯದೆಂದು ಅವರು ಅಭಿಪ್ರಾಯಪಟ್ಟರು. ಆದ ಕಾರಣ ವೈಷ್ಣವ ಯಜ್ಞಕ್ಕೆ ಬೇಕಾದ ಏರ್ಪಾಡುಗಳು ನಡೆದುವು. ನಗರದ ಹೊರಗೆ ಯಜ್ಞಶಾಲೆಯನ್ನು ನಿರ್ಮಿಸಿದರು. ಈ ಯಜ್ಞಕ್ಕೆ ಬರಬೇಕೆಂದು ದ್ವೈತ ವನದಲ್ಲಿರುವ ಪಾಂಡವರನ್ನು ಆಹ್ವಾನಿಸಲು ದುರ್ಯೋಧನನು ದೂತರನ್ನು ಕಳುಹಿಸಿದನು.

ಧರ್ಮರಾಜನು ಆ ದೂತನೊಂದಿಗೆ, "ದುರ್ಯೋಧನನು ವೈಷ್ಣವ ಯಜ್ಞ ಮಾಡುವುದು ಬಹು ಸಂತೋಷದ ವಿಷಯ. ನಮಗೆ ಕೂಡಾ ಬಂದು ಯಜ್ಞವನ್ನು ನೋಡಬೇಕೆಂಬ ಆಶೆ ತುಂಬಾ ಇದ್ದರೂ, ಬರಲಾಗದ ಸ್ಥಿತಿಯಲ್ಲಿದ್ದೇವೆ. ನಾವೀಗ ಹಸ್ತಿನಾಪುರಕ್ಕೆ ಬಂದರೆ ನಮ್ಮ ವನವಾಸದ ದೀಕ್ಷೆಗೆ ಭಂಗ ಬರುತ್ತದೆ" ಎಂದು ಹೇಳಿ ಕಳುಹಿಸಿದನು.

ಆಗ ಭೀಮನು ಆ ದೂತರನ್ನು ನೋಡಿ, "ನಮ್ಮ ವನವಾಸವೂ ಅಜ್ಞಾತವಾಸವೂ ಪೂರ್ತಿಯಾದ ಮೇಲೆ ನಮ್ಮ ಧರ್ಮರಾಜನು ದುರ್ಯೋಧನನನ್ನೂ ಅವನ ತಮ್ಮಂದಿರನ್ನೂ ಬಲಿ ಪಶುಗಳನ್ನಾಗಿಟ್ಟು ಕೊಂಡು ರಣಾಗ್ನಿಯಿಂದ ದೊಡ್ಡ ಯಜ್ಞ ಮಾಡುತ್ತಾನೆ. ಆ ಯಜ್ಞಕ್ಕೆ ನಾನು ಖಂಡಿತ ಬರುತ್ತೇನೆಂದು ದುರ್ಯೋಧನನೊಂದಿಗೆ ಹೇಳು" ಎಂದನು.

ದುರ್ಯೋಧನನ ವೈಷ್ಣವ ಯಜ್ಞವು ಸಾಂಗೋಪಾಂಗವಾಗಿ ನಡೆದು ಪೂರ್ತಿಯಾಯಿತು. ಕರ್ಣನು ದುರ್ಯೋಧನನನ್ನು ಅಭಿನಂದಿಸುತ್ತ, "ಬರುವ ಯುದ್ಧದಲ್ಲಿ ನಾನು ಪಾಂಡವರನ್ನು ಕೊಂದು ನಿನ್ನಿಂದ ರಾಜಸೂಯ ಮಾಡಿಸುತ್ತೇನೆ" ಎಂದನು.



ಅಲ್ಲಿ ಪಾಂಡವರು ದ್ವೈತ ವನದಲ್ಲಿ ಬಹಳ ಕಾಲ ವಾಸವಾಗಿದ್ದುದರಿಂದ, ಅವರು ಆಡಿದ ಬೇಟೆಯ ಕಾರಣದಿಂದಾಗಿ ವನ ಮೃಗಗಳ ಸಂಖ್ಯೆ ಕಡಮೆಯಾಗುತ್ತಾ ಹೋಯಿತು. ಅದನ್ನು ನೋಡಿ ಧರ್ಮರಾಜನು ತನ್ನ ತಮ್ಮಂದಿರೊಂದಿಗೆ ಮತ್ತೆ ಕಾಮ್ಯಕ ವನಕ್ಕೇ ಹೋದನು. ಅಲ್ಲಿ ಅವರು ಹಣ್ಣು ಕಾಯಿ ಗೆಡ್ಡೆ ಗೆಣಸುಗಳನ್ನೇ ತಿನ್ನುತ್ತ ಅದರಿಂದಲೇ ಕಾಲಕ್ಷೇಪ ಮಾಡಿಕೊಂಡಿದ್ದರು. ಈ ರೀತಿಯಾಗಿ ಅವರ ವನವಾಸದ ಹನ್ನೊಂದು ವರ್ಷವು ಮುಗಿಯಿತು. ಗಡುವು ಹತ್ತಿರವಾದಂತೆ ಧರ್ಮರಾಜನಿಗೆ ಚಿಂತೆಯಾಗ ತೊಡಗಿತು. ತಾನು ಜೂಜಾಡದೆ ಇರುತ್ತಿದ್ದರೆ, ತನಗೂ ತನ್ನ ತಮ್ಮಂದಿರಿಗೂ ದ್ರೌಪದಿಗೂ ಈ ದುರ್ಭರವಾದ ಕಷ್ಟಗಳು ಬರುತ್ತಿದ್ದಿಲ್ಲ. ಇನ್ನು ಮುಂದೆ ಬರಲಿರುವುದನ್ನು ಆಲೋಚನೆ ಮಾಡಿದರೂ ಬಾಧೆಯಾಗಿಯೇ ಇದೆ. ಕರ್ಣನು ಪಾಂಡವರೆಲ್ಲರನ್ನೂ ಯುದ್ಧದಲ್ಲಿ ಗೆಲ್ಲುವೆನೆಂದು



ದುರ್ಯೋಧನನಿಗೆ ಮಾತು ಕೊಟ್ಟಿದ್ದಾನೆ. ಇಂತಹ ಮನೋವೇದನೆಗಳಲ್ಲಿ ತಳಮಳಿಸುವ ಧರ್ಮರಾಜನಿಗೆ ರಾತ್ರಿಯಲ್ಲಿ ನಿದ್ರೆ ಕೂಡಾ ಬರುತ್ತಿದ್ದಿಲ್ಲ. ಪಾಂಡವರು ಹೀಗೆ ಕಾಮ್ಯಕ ವನದಲ್ಲಿರುವಾಗ ಒಂದುಸಾರಿ ವ್ಯಾಸನು ಬಂದು ಅವರಿಗೆ ದರ್ಶನ ವಿತ್ತನು. ಪಾಂಡವರು ಸೊರಗಿರುವುದನ್ನು ನೋಡಿ ಆತನಿಗೆ ಬಹಳ ಚಿಂತೆಯಾಯಿತು. ಪಾಂಡವರು ಚಿಂತಿಸುತ್ತಿದ್ದಾರೆಂಬುದನ್ನರಿತು ವ್ಯಾಸಮುನಿ ಅವರ ಚಿಂತೆ ಉಪಶಮನವಾಗುವಂತಹ ಮಾತುಗಳನ್ನು ಹೇಳುತ್ತ, ಹದಿಮೂರು ವರ್ಷಗಳು ಪೂರ್ತಿಯಾದ ಕೂಡಲೇ ಪಾಂಡವರಿಗೆ ರಾಜ್ಯ ಪ್ರಾಪ್ತಿಯಾಗುತ್ತದೆಂದು ಧೈರ್ಯ ಹೇಳಿ ಹೊರಟು ಹೋದನು.

ಈ ವಿಧವಾಗಿ ಪಾಂಡವರು ಕಾಮ್ಯಕವನದಲ್ಲಿ ಕಷ್ಟಪಡುತ್ತಿರುವಾಗ ಹಸ್ತಿನಾವತಿಯಲ್ಲಿ ದುರ್ಯೋಧನ ಕರ್ಣ ಶಕುನಿಯರು ಅವರನ್ನು ಇನ್ನೂ ಕಷ್ಟಕ್ಕೆ ಗುರಿಪಡಿಸಲು ಆಲೋಚನೆ ಮಾಡಿಕೊಂಡೇ ಇದ್ದರು.

ಆ ಸಮಯದಲ್ಲಿ ದುರ್ವಾಸ ಮಹಾಮುನಿ ಹತ್ತು ಸಾವಿರ ಮಂದಿ ಶಿಷ್ಯರೊಂದಿಗೆ ಹಸ್ತಿ ಪುರಕ್ಕೆ ಬಂದನು. ದುರ್ವಾಸನು ಮಹಾ ಕೋಪಿ ಆತನಿಗೆ ಮಾಡುವ ಆತಿಥ್ಯದಲ್ಲಿ ಒಂದಿಷ್ಟು ಲೋಪವಾದರೂ ಶಪಿಸಿ ಬಿಡುವನು. ಆದುದರಿ ದುರ್ಯೋಧನನೂ ಅವನ ತಮ್ಮಂದಿರೂ ಆ ಮು ಅತ್ಯಂತ ಭಕ್ತಿ ಶ್ರದ್ಧೆಗಳಿಂದ ಸೇವೆಗಳನ್ನು ಮಾಡು ವಿನಯವಿಧೇಯತೆಗಳಿಂದ ನಡೆದುಕೊಳ್ಳುತ್ತಿದ್ದ ದುರ್ವಾಸನು ಕೂಡ ದುರ್ಯೋಧನನಿಗೆ ಅ ಎಗೆಯ ಪರೀಕ್ಷೆಗಳನ್ನು ಒಡ್ಡಿದನು.

"ರಾಜಾ, ನನಗೆ ಹಸಿವಾಗಿದೆ. ಶೀಘ್ರ ಭೋಜನದ ಸಿದ್ಧತೆ ಮಾಡಿಸು. ಸ್ನಾನಮಾಡಿ ಬ ತ್ತೇನೆ" ಎಂದು ದುರ್ವಾಸನು ಹೊರಟುಹೋ ಎಷ್ಟು ಹೊತ್ತಾದರೂ ಹಿಂದಿರುಗಲಾರ. ಬಹಳ ಸಾವಕಾಶವಾಗಿ ಬಂದು, "ನನಗೀಗ ಹ ಯಿಲ್ಲ" ಎಂದು ಬಿಡುವನು.

ಒಂದುಸಾರಿ ನಡುರಾತ್ರಿಯ ಹೊತ್ತಿಗೆ "ನಮಗೆಲ್ಲಾ ತುಂಬಾ ಹಸಿವೆಯಾಗಿದೆ. ಬಡಿಸ ತಯಾರು ಮಾಡಿಸು" ಎನ್ನುತ್ತಾನೆ ದುರ್ವಾ ಎಲ್ಲಾ ಬಡಿಸಿ ಊಟಕ್ಕೆ ಕರೆಯುವಾಗ, "ಈಗ ಊ ಬೇಡ. ಹಸಿವೆಯಿಲ್ಲ" ಎನ್ನುವನು. ಒಂದೊ ಸಾರಿ "ಛೀ! ಎಂಥ ಊಟವಿದು!" ಎಂದು ಬೈ ಅರ್ಧ ಊಟದಿಂದ ಏಳುವನು. ಆಗೆಲ್ಲಾ ದುರ್ಯೋ ಧನನು ಬಹಳ ಸಹನೆಯಿಂದ ನಡೆದುಕೊಳ್ಳುವ

ಹೀಗೆ ಎಷ್ಟೆಷ್ಟು ಸಹನೆ ಮೀರಿಸುವಂತಹ ಪರಿ ಗಳನ್ನಿಟ್ಟರೂ ದುರ್ಯೋಧನನು ತಾಳ್ಮೆಯಿಂದ ಸೇವೆ ಮಾಡುವುದನ್ನು ನೋಡಿ ದುರ್ವಾಸ ಸಂತೋಷಪಟ್ಟು, "ರಾಜಾ, ನಿನ್ನ ಪರಿಚರ್ಯೆಗ ಬಹಳ ಸಂತೋಷವಾಯಿತು. ನಿನಗೇನಾದ ಕೋರಿಕೆ ಇದ್ದರೆ ಹೇಳು, ತೀರಿಸುತ್ತೇನೆ" ಎಂದ ದುರ್ವಾಸನ ಶಾಪಕ್ಕೊಳಗಾಗದೆ, ಅನುಗ

ವಾದುದನ್ನು ನೋಡಿ, ದುರ್ಯೋಧನನು ಬಹಳ ಸಂತೋಷಪಟ್ಟನು. ಅವನು ಶಕುನಿ ದುಶ್ಶಾಸನ ಕರ್ಣರೊಂದಿಗೆ ಆಲೋಚನೆ ಮಾಡಿ, ದುರ್ವಾಸನನ್ನು ನೋಡಿ "ಸ್ವಾಮಿ, ಪರಮ ಧರ್ಮಾತ್ಮನಾದ ಧರ್ಮರಾಜನು ಅರಣ್ಯದಲ್ಲಿದ್ದಾನಷ್ಟೆ ? ಅವನೊಂದಿಗೆ ಅವನ ತಮ್ಮಂದಿರೂ ದ್ರೌಪದಿಯೂ ಅನೇಕ ಮಂದಿ ಬ್ರಾಹ್ಮಣರೂ ಇದ್ದಾರೆ. ದ್ರೌಪದಿ ಅವರಿಗೆಲ್ಲಾ ಭೋಜನ ಬಡಿಸಿ, ಕಡೆಗೆ ತಾನೂ ಭೋಜನ ತೀರಿಸಿ ಮಲಗಿರುವ ಸಮಯದಲ್ಲಿ ನೀವು ನಿಮ್ಮ ಶಿಷ್ಯಗಣದೊಂದಿಗೆ ಅಲ್ಲಿಗೆ ಹೋಗಿ ನಿಮಗೆಲ್ಲಾ ಭೋಜನ ವಿಡುವಂತೆ ಅವರನ್ನು ಕೇಳಬೇಕು. ಇದೇ ನಾನು ನಿಮ್ಮಿಂದ ಕೇಳುವ ವರ" ಎಂದನು.

ದುರ್ವಾಸನು ಅದಕ್ಕೆ ಒಪ್ಪಿಕೊಂಡು ತನ್ನ ಹತ್ತು ಸಾವಿರ ಶಿಷ್ಯಗಣದೊಂದಿಗೆ ಕಾಮ್ಯಕವನಕ್ಕೆ ಹೊರಟನು. ಅದನ್ನು ನೋಡಿ ದುರ್ಯೋಧನನಿಗೆ ಬಹಳ ಸಂತೋಷವಾಯಿತು.

"ಇದು ಒಳ್ಳೇ ಉಪಾಯ! ಪಾಂಡವರು ದುರ್ವಾಸ ಮಹಾಮುನಿಯ ಕೋಪಕ್ಕೆ ಗುರಿಯಾಗಿ ಸಂಪೂರ್ಣ ನಾಶವಾಗಿ ಹೋಗುವುದು ಖಂಡಿತ. ಇಷ್ಟು ಕಾಲದ ಮೇಲೆ ನಮ್ಮ ಕೋರಿಕೆ ತೀರುವ ಹಾಗಾಯಿತು" ಎಂದು ಕರ್ಣನು ದುರ್ಯೋಧನನೊಂದಿಗೆ ಹೇಳಿದನು.

ಕಾಮ್ಯಕವನದಲ್ಲಿ ಒಂದುದಿನ ದ್ರೌಪದಿ
ಗಂಡಂದಿರಿಗೂ, ಬ್ರಾಹ್ಮಣರಿಗೂ ಬಡಿಸಿ, ತನ್ನ ಊ
ವನ್ನೂ ತೀರಿಸಿ ವಿಶ್ರಾಂತಿ ಪಡೆಯುತ್ತಿದ್ದ
ಆಗ ದುರ್ವಾಸನು ತನ್ನ ಹತ್ತು ಸಾವಿರ ಮ
ಶಿಷ್ಯರೊಂದಿಗೆ ಅಲ್ಲಿಗೆ ತಲಪಿದನು.

ಧರ್ಮರಾಜನು ತನ್ನ ತಮ್ಮಂದಿರೊಂ
ದುರ್ವಾಸನಿಗೆ ಇದಿರಾಗಿ ಹೋಗಿ, ಸ್ವಾಗತ ಹೇ
ಅರ್ಘ್ಯ ಪಾದ್ಯಗಳಿಂದ ಪೂಜಿಸಿ, ಅವನ ಪಾದಗ
ನಮಸ್ಕಾರ ಮಾಡಿ, "ಮಹಾತ್ಮಾ, ತಾವು ತ
ಶಿಷ್ಯರೊಂದಿಗೆ ಸಹಾ ನಮ್ಮ ಆತಿಥ್ಯವನ್ನು ಸ್ವೀಕ
ಬೇಕು" ಎಂದು ಕೇಳಿಕೊಂಡನು.

ಈ ಮಹಾರಣ್ಯದಲ್ಲಿರುವವನು ತನಗೂ
ಶಿಷ್ಯ ಪರಿವಾರದವರಿಗೂ ಹೇಗೆ ಭೋಜನವಿ
ಆತಿಥ್ಯ ನೀಡುವನೋ ಎಂಬ ಆಲೋಚನೆ ಕೂ
ಮಾಡದೆ, ದುರ್ವಾಸನು ಧರ್ಮರಾಜನ ಆತಿ
ವನ್ನು ಸ್ವೀಕರಿಸಲು ಒಪ್ಪಿಕೊಂಡು, ತನ್ನ ಶಿಷ್ಯರೊ
ದಿಗೆ ಸ್ನಾನಮಾಡಿ ಬರುವೆವೆಂದು ಹೇಳಿ ಸಮೀ
ದಲ್ಲಿರುವ ಗಂಗಾನದಿಗೆ ಹೋದನು.

ಇಷ್ಟು ಮಂದಿಗೆ ಹೇಗೆ ಭೋಜನ ಬಡಿಸು
ದೆಂದು ದ್ರೌಪದಿಗೆ ಅರ್ಥವಾಗಲಿಲ್ಲ. ಅವಳಿಗೆ ಬ
ಯಾವ ದಾರಿಯೂ ತೋರದೆ ಆಪದ್ಬಾಂಧವನ
ಕೃಷ್ಣನನ್ನು ಧ್ಯಾನಿಸಿದಳು.





# ಶಿವಪುರಾಣ

೧೧

ಪಾರ್ವತೀ-ಪರಮೇಶ್ವರರ ವಿವಾಹ ಮಹೋತ್ಸ ಕ್ಕೆ ಬಂದ ಅತಿಥಿಗಳೆಲ್ಲರೂ ಹೊರಟುಹೋದರು. ಮೇಲೆ ಶಿವನು ನಂದೀಶ್ವರನನ್ನು ಸಮೀಪ ಕರೆದು, ನಾನೂ ಪಾರ್ವತಿಯೂ ಏಕಾಂತದಲ್ಲಿ ವಿಶ್ರಾಂತಿ ಗೆದುಕೊಳ್ಳುತ್ತೇವೆ. ಅದಕ್ಕೆ ತಕ್ಕ ಹಾಗೆ ನಮ್ಮ ಹಾಮಂದಿರವನ್ನು ಅಲಂಕರಿಸಬೇಕು'' ಎಂದನು.

ನಂದೀಶ್ವರನು ಗಣಾಧಿಪತಿಗಳನ್ನು ತನ್ನೊಂದಿಗೆ ಕೊಂಡು, ಮಹಾಮಂದಿರದೊಳಗೆ ಹೋದನು. ಲ್ಲವನ್ನೂ ಶುದ್ಧ ಜಲದಿಂದ ತೊಳೆದು ಶುಭ್ರ ಡಿ ಪನ್ನೀರು ತಳಿದರು. ಜವ್ವಾದಿ ಮೊದಲಾದ ಳ ದ್ರವ್ಯಗಳಿಂದ, ಮುತ್ತಿನ ಪುಡಿಗಳಿಂದ ಗಳ ರಂಗವಲ್ಲಿಯ ಚಿತ್ರಗಳನ್ನು ಹಾಕಿದರು. ಳ ಮಣಿಗಳಿಂದ ತಯಾರಿಸಲ್ಪಟ್ಟ ಮಂಚದ ಲೆ ಹಂಸತೂಲಿಕಾ ತಲ್ಪವನ್ನು ಹಾಸಿದರು. ಡೆಗಳಲ್ಲಿ ಸುಂದರವಾದ ಚಿತ್ರಪಟಗಳನ್ನು ತಗಲಿಸಿ ನ, ಪಾನೀಯಗಳನ್ನೂ, ತಿಂಡಿಗಳನ್ನೂ, ಹೂಗ ನ್ನೂ, ಫಲಗಳನ್ನೂ ಕೈಗೆ ಸಿಗುವ ಹಾಗೆ ಇಡಬೇಕಾ ಟ್ಟಿದ್ದರು. ಹೀಗೆ ವಿಶ್ರಾಂತಿ ಮಂದಿರವು ಸಿದ್ಧವಾದ ಮೇಲೆ, ನಂದೀಶ್ವರನು ಹೋಗಿ ಆ ಸಂಗತಿಯನ್ನು ಶಿವನೊಂದಿಗೆ ಅರಿಕೆ ಮಾಡಿದನು.

ಆಗ ಶಿವನು ನಂದೀಶ್ವರನನ್ನು ಕುರಿತು, "ನಂದೀಶ್ವರಾ, ನಾವಿನ್ನು ಅಂತರ್ಗೃಹಕ್ಕೆ ಹೋಗುತ್ತೇವೆ. ನೀವಾರೂ ನಾನು ಕರೆಯುದ ವಿನಹಾ ಒಳಗೆ ಬರಕೂಡದು. ಭವನದ ಎಲ್ಲಾ ಭಾಗಗಳಲ್ಲಿಯೂ ಕಾವಲು ಕಾಯುತ್ತಿರಬೇಕು'' ಎಂದು ಎಚ್ಚರಿಕೆ ನೀಡಿ ಪಾರ್ವತಿಯ ಕೈಹಿಡಿದು ಕರೆದುಕೊಂಡು ಮಂದಿರದೊಳಗೆ ಹೋದನು. ಆಮೇಲೆ ಅವರಿಬ್ಬರೂ ಕಾಲವು ಕ್ರಮಿಸುತ್ತಿದ್ದುದೇ ಗೊತ್ತಾಗದಂತೆ ಆನಂದದಿಂದ ತೇಲಿಹೋಗುತ್ತಿದ್ದರು.

ಈ ಸಂದರ್ಭದಲ್ಲಿ ದೇವತೆಗಳಿಗೆ ತಾರಕಾಸುರನಿಂದಾಗುವ ಕಷ್ಟನಷ್ಟಗಳು ದಿನೇದಿನೇ ಹೆಚ್ಚಾಗುತ್ತ, ಮೀತಿಮೀರಿ ತಾಳ್ಮೆ ತಪ್ಪುವ ಸ್ಥಿತಿಗೆ ಬಂದಿತು. ದೇವತೆಗಳೆಲ್ಲಾ ಕೂಡಿ ಬ್ರಹ್ಮನ ಬಳಿಗೆ ಹೋಗಿ, "ಓ ಲೋಕ ಪಿತಾಮಹನೇ, ನೀನು ಕೊಟ್ಟ ವರಗಳ ಮೂಲಕವಾಗಿ ನಾವು ನರಕಬಾಧೆಗಳನ್ನು ಅನುಭವಿಸಬೇಕಾಯಿತು. ತಾರಕಾಸುರನ ಬಾಧೆ ತಾಳಲಾರ

ಹಿಂಬದಿಯ ಚಿತ್ರ ಕಥೆ



ದಂತಾಗಿದೆ. ಆವನು ಸತ್ತರೆ ಹೊರತು ನಮಗೆ ಸುಖವಿಲ್ಲ, ನೆಮ್ಮದಿಯಿಲ್ಲ. ಅವನ ಸಾವಿಗೆ ನೀನೇ ಏನಾದರೂ ದಾರಿ ತೋರಿಸಿ ನಮ್ಮನ್ನು ರಕ್ಷಿಸಬೇಕು" ಎಂದು ಮೊರೆಯಿಟ್ಟರು.

ಅದಕ್ಕೆ ಬ್ರಹ್ಮನು ಅವರನ್ನು ಕುರಿತು, "ಹೌದು. ನಾನು ತಾರಕಾಸುರನಿಗೆ ಅಸಾಧಾರಣವಾದ ವರಗಳನ್ನು ಕೊಟ್ಟದ್ದು ನಿಜವೇ. ಹಾಗೆ ವರಗಳನ್ನು ಕೊಡದೆ ತಪ್ಪಲು ಸಾಧ್ಯವಿತ್ತೆ? ಒಳ್ಳೆಯವರಾದರೂ ಕೆಟ್ಟವರಾದರೂ ಕೇಳಿದ ವರವನ್ನು ಕೊಡಲೇ ಬೇಕಾಗುತ್ತದೆ. ದುಷ್ಟರೆಂಬ ಉದ್ದೇಶದಿಂದ ವರಗಳನ್ನು ಕೊಡದಿದ್ದರೆ ಅವರು ತಪಸ್ಸಿನಿಂದೇಳುವುದೇ ಇಲ್ಲ. ಹಾಗೆ ಬಿಟ್ಟರೆ ಅವರ ತಪಸ್ಸಿನಿಂದ ಏಳುವ ಅಗ್ನಿ ಲೋಕಗಳನ್ನು ಸುಟ್ಟು ಹಾಕುವುದಿಲ್ಲವೆ? ಲೋಕವನ್ನು ಕಾಪಾಡಲಿಕ್ಕಾಗಿಯೇ ಅವರು ಕೇಳಿದ ವರಗಳನ್ನು ಕೊಟ್ಟುಬಿಡುತ್ತೇನೆ. ಆ ವರಗಳ ಸಹಾಯದಿಂದ ಅವರು ಲೋಕಗಳನ್ನು ಪೀಡಿಸಲು ಬಂದಾಗ ಅವರನ್ನು ಕೊಲ್ಲಬೇಕಾದ ಅಗತ್ಯವೂ ಬರುತ್ತೆ. ಬ
ಉಪಾಯವಿಲ್ಲ. ಬನ್ನಿ, ನಾವೆಲ್ಲಾ ವಿಷ್ಣುವಿನ ಬ
ಹೋಗಿ ಹೇಳಿಕೊಳ್ಳೋಣ" ಎಂದನು.

ಅಲ್ಲಿಂದ ಎಲ್ಲರೂ ಕೂಡಿ ವಿಷ್ಣುವಿನ ಬ
ಹೋಗಿ, ತಾರಕಾಸುರನ ಘೋರ ಬಾಧೆಗಳ
ಕುರಿತು ಹೇಳಿಕೊಂಡು ರಕ್ಷಿಸುವಂತೆ ಪ್ರಾರ್ಥಿಸಿದ
ಆಗ ವಿಷ್ಣು ಅವರನ್ನು ಕುರಿತು, "ಪಾರ್ವತೀ ಪರ
ಶ್ವರರು ವಿವಾಹ ಮಾಡಿಕೊಂಡು ಅನ್ಯೋನ್ಯ ದಂ
ಗಳಾಗಿದ್ದಾರಷ್ಟೆ? ಅವರಿಗೆ ಕುಮಾರನು ಹುಟ್ಟಿ
ಕೂಡಲೇ ನಿಮ್ಮ ಕಷ್ಟ ತೀರುತ್ತದೆ" ಎಂದನು.

"ಶಿವಪಾರ್ವತಿಯರ ವಿವಾಹವಾಗಿ ಬಹಳ ಕಾ
ವಾಯಿತು; ಇನ್ನೂ ಅವರಿಗೆ ಕುಮಾರಸಂಭವ
ಲಿಲ್ಲ. ನೀನು ಬಂದು ಶಿವನನ್ನು ನೋಡಿ ನ
ಗೋಳನ್ನು ಹೇಳಿ, ಆತನ ಮನಸ್ಸು ಕರಗಿಸಬೇ
ಇಲ್ಲದಿದ್ದರೆ ಇನ್ನೆಷ್ಟು ಕಾಲವಾಗುವುದೋ? ಅ
ರೊಳಗೆ ಸ್ವರ್ಗದ ಹೆಸರೇ ಉಳಿಯದೆ ಹೋದೀತ
ಎಂದರು ದೇವತೆಗಳು.

ವಿಷ್ಣು ಬ್ರಹ್ಮಾದಿ ದೇವತೆಗಳನ್ನು ಕರೆದುಕೊಂ
ಕೈಲಾಸಕ್ಕೆ ಹೊರಟು ಬಂದರು. ಶಿವನ ಭವ
ಸುತ್ತಲೂ ನಂದೀಶ್ವರನೇ ಮೊದಲಾದವರು ಕಣ್
ಎಣ್ಣೆ ಹಾಕಿಕೊಂಡು ಕಾವಲು ಕಾಯುವುದ
ನೋಡಿದರು. ವಿಷ್ಣು ನಂದೀಶ್ವರನನ್ನು ನೋ
"ನಾವು ಶಿವನನ್ನು ನೋಡಲು ಬಂದಿದ್ದೇ
ನಮ್ಮನ್ನು ಒಳಕ್ಕೆ ಬಿಡು" ಎಂದನು.

"ಶಿವಪಾರ್ವತಿಯರು ಈಗ ಏಕಾಂತದಲ್ಲಿದ್ದಾ
ಯಾರನ್ನೂ ಒಳಕ್ಕೆ ಬಿಡಕೂಡದೆಂದೂ ಶಿವನ ಆ
ಯಾಗಿದೆ. ಆತನ ಆಜ್ಞೆಯಂತೆ ನಡೆಯಬೇಕಾದು
ನಮ್ಮ ವಿಧಿ. ಕ್ಷಮಿಸಬೇಕು" ಎಂದ ನಂದೀಶ್ವರ.

ಇದನ್ನು ಕೇಳಿ ವಿಷ್ಣು ಬ್ರಹ್ಮಾದಿಗಳು ಹತಾ
ರಾದರು. ಅವರು ಬಂದ ಕೆಲಸಕ್ಕೆ ವಿಘ್ನ ಉಂ
ಯಿತು. ಆಗ ವಿಷ್ಣು ದೇವತೆಗಳನ್ನು ಕುರಿ

ಣ್ಣಿನಿಂದ ಪಾರ್ಥಿವಲಿಂಗವನ್ನು ಮಾಡಿ ಶಿವ ಪಂಚಾಕ್ಷರಿಯನ್ನು ಜಪಿಸುತ್ತ ಪೂಜಿಸಿದರೆ, ಶಿವನು ಪ್ರತ್ಯಕ್ಷನಾಗಿ ದರ್ಶನ ಕೊಡುತ್ತಾನೆ" ಎಂದು ಆಲೋಚನೆ ಹೇಳಿದನು. ಅದರಂತೆ ದೇವತೆಗಳು ಮಣ್ಣಿನ ಪಾರ್ಥಿವಲಿಂಗವನ್ನು ತಯಾರಿಸಿ ಪಂಚಾಕ್ಷರೀ ಮಂತ್ರವನ್ನು ಜಪಿಸಿ, ಷೋಡಶೋಪಚಾರಗಳಿಂದ ಪೂಜಿಸಿ, "ಹರಹರ ಮಹಾದೇವ ಶಂಭೋ !" ಎಂದು ಇಡಿಯ ಕೈಲಾಸವೇ ಪ್ರತಿಧ್ವನಿ ಕೊಡುವ ಹಾಗೆ ಗರ್ಜಿಸಿ ಕರೆದರು. ಹಾಗೆಯೇ ಶಿವನನ್ನು ಸ್ತೋತ್ರ ಮಾಡಿ ಮಾಡಿ ಕರೆದರು.

ಸ್ತೋತ್ರಪ್ರಿಯನಾದ ಶಿವನು ಇದನ್ನು ಕೇಳಿ, ಪಾರ್ವತಿಯನ್ನು ಒಳಗೇ ಬಿಟ್ಟು, ಎದ್ದು ದ್ವಾರದ ಬಳಿಗೆ ಬಂದು, "ದೇವತೆಗಳೇ, ನನ್ನನ್ನು ಏತಕ್ಕೆ ಕರೆದಿರಿ ? ಏನಾಗಬೇಕು ?" ಎಂದು ಕೇಳಿದನು. ಆಗ ದೇವತೆಗಳು ತಾರಕಾಸುರನ ಕಾಟವನ್ನು ಹೇಳಿದರು. ಬ್ರಹ್ಮನು, "ಈಶ್ವರಾ, ಆ ತಾರಕಾಸುರನನ್ನು ಸಂಹರಿಸಲು ನಿನ್ನ ರುದ್ರ ಶಕ್ತಿಯಿಂದ ಒಬ್ಬ ಮಗನನ್ನು ಸೃಷ್ಟಿಸಬೇಕು" ಎಂದು ಬೇಡಿಕೊಂಡರು. ಹಾಗೆಯೇ ಆಗಲೆಂದು ಶಿವನು ತೇಜಃಪಿಂಡವನ್ನು ತಯಾರಿಸಿ ತನ್ನದೊಂದು ಅಂಶ ವನ್ನು ಅಗ್ನಿಯಲ್ಲಿ ಬಿಟ್ಟನು. ಇದನ್ನು ನೋಡಿ ಪಾರ್ವತಿಗೆ ಕೋಪ ಬಂದು, ಅವಸರಪಟ್ಟ ದೇವತೆಗಳಿಗೆ ಸಂತಾನವಿಲ್ಲದೆ ಹೋಗಲೆಂದು ಶಾಪ ಕೊಟ್ಟಳು. ಶಿವನ ಅಂಶವನ್ನು ಧರಿಸಿದ ಅಗ್ನಿ ಅದರ ಉಷ್ಣೋಗ್ರತೆಯನ್ನು ಸಹಿಸಲಾರದೆ ತಾಪದಿಂದ ತಲ್ಲಣಿಸ ತೊಡಗಿದನು. ಆಗ ಸಪ್ತಮಹರ್ಷಿಗಳು ಒಂದು ಯಜ್ಞವನ್ನು ಪ್ರಾರಂಭಿಸಿದ್ದರು. ಅವರು ಆಹುತಿಯನ್ನು ಕೊಡುವಾಗ ಅವರ ಪತ್ನಿಯರೂ ಅವರೊಂದಿಗೆ ಇದ್ದರು. ಶಿವಶಕ್ತಿಯ ತಾಪದಿಂದಾಗಿ ಅಗ್ನಿ ತನ್ನ ತಾಪವನ್ನು ಸಪ್ತಮಹರ್ಷಿಗಳ ಪತ್ನಿಯರಿಂದಲೇ ಶಮನ ಮಾಡಿಕೊಳ್ಳಬೇಕೆಂದು ಮೋಹಗೊಂಡು ಚಿಂತಿಸಲಾರಂಭಿಸಿ



ದನು. ಈ ಬಗೆಯಾಗಿ ತನ್ನ ಗಂಡನು ಪಡುತ್ತಿರುವ ವಿರಹ ಬಾಧೆಯನ್ನು ಅವನ ಹೆಂಡತಿಯಾದ ಸ್ವಾಹಾ ದೇವಿ ನೋಡಿ ಅದಕ್ಕಾಗಿ ಒಂದು ತಂತ್ರ ಮಾಡಿದಳು. ಅವಳು ಒಂದೊಂದು ದಿನ ಒಬ್ಬೊಬ್ಬ ಋಷಿ ಪತ್ನಿಯ ರೂಪವನ್ನು ಧರಿಸಿ ತನ್ನ ಗಂಡನಾದ ಅಗ್ನಿ ಹೋತ್ರನ ಬಾಧೆಯನ್ನು ಶಮನ ಮಾಡಿದಳು. ಆದರೆ ಅವಳಿಗೆ ಅರುಂಧತಿಯ ರೂಪ ಧರಿಸಲು ಸಾಧ್ಯವಾಗದೆ ಹೋಯಿತು. ಅಂತೆಯೇ ಆರುಮಂದಿ ಋಷಿಪತ್ನಿಯರಂತೆ ನಾಟಕವಾಡಿದುದರಿಂದ ಅಗ್ನಿ ಯಲ್ಲಿ ಸೇರಿ ಬಾಧಿಸುವ ಶಿವಶಕ್ತಿಯನ್ನು ಸ್ವಾಹಾ ದೇವಿ ತಾನು ಧರಿಸಿಕೊಂಡಳು. ಅದು ಆರು ಭಾಗ ಗಳಾಗಿ ಅವಳಲ್ಲಿ ಹುದುಗಿದುದರಿಂದ, ಅವಳಿಗೂ ಅದನ್ನು ಧರಿಸಲು ಸಾಧ್ಯವಾಗದೆ, ಅದರಿಂದಾಗುವ ವೇದನೆಯನ್ನೂ ಸಹಿಸಲಾಗದೆ, ಕೈಲಾಸದಲ್ಲಿರುವ ಒಂದು ಶಿಖರದಲ್ಲಿ ತನ್ನಲ್ಲಿರುವ ಶಿವಶಕ್ತಿಯ ಆರು ಭಾಗಗಳನ್ನೂ ಬಿಟ್ಟು ಹಗುರಾದಳು, ಕೂಡಲೇ

ವಾಯುದೇವನು ಆ ಭಾಗಗಳನ್ನು ಗಂಗೆಯಲ್ಲಿ ದೂಡಿದನು. ಗಂಗೆ ಅವುಗಳನ್ನೆಲ್ಲ ಒಂದಾಗಿಸಿ ದಡ ದಲ್ಲಿರುವ ಹುಲ್ಲು ಪೊದೆಗಳ ಕಡೆಗೆ ತಳ್ಳಿದಳು. ಅಲ್ಲಿಯೇ ಆ ಭಾಗಗಳು ಕೂಡಿ ಪಕ್ವವಾಗಿ ಮಾರ್ಗ ಶಿರ ಷಷ್ಠಿ ಧನಿಷ್ಠಾನಕ್ಷತ್ರ, ವೃಶ್ಚಿಕ-ಲಗ್ನದಲ್ಲಿ ಒಬ್ಬ ಬಾಲಕನ ರೂಪವನ್ನು ಪಡೆಯಿತು. ಆ ಹುಡುಗನಿಗೆ ಆರು ಮುಖಗಳೂ, ಹನ್ನೆರಡು ಕೈಗಳೂ, ವಜ್ರ ಸಮಾನವಾದ ಶರೀರವೂ ಇದ್ದುವು.

ಆ ಹುಡುಗನನ್ನು ಅಗ್ನಿಹೋತ್ರನಿಂದಾಗಿ ಸಪ್ತರ್ಷಿ ಗಳ ಹೆಂಡತಿಯರೇ ಹಡೆದರೆಂದು ಲೋಕದಲ್ಲಿ ವಾಡಿಕೆಯಾಯಿತು. ಅದನ್ನು ಕೇಳಿ ಸಪ್ತಮಹಾ ಮುನಿಗಳು ತಮ್ಮ ತಮ್ಮ ಪತ್ನಿಯರನ್ನು ಹೊರ ದೂಡಲು ನೋಡಿದರು. ಆಗ ಸ್ವಾಹಾದೇವಿ ಅವ ರೊಂದಿಗೆ ಸತ್ಯಸಂಗತಿ ಹೇಳಿ, "ತಪ್ಪು ನನ್ನದೇ. ನಿಮ್ಮ ಪತ್ನಿಯರಲ್ಲಿ ದೋಷವೇನಿಲ್ಲ" ,ಎಂದಳು. ಆದರೂ ಮುನಿಗಳು ಕೇಳದೆ, "ಲೋಕ ನಿಂದೆಯನ್ನು ಅಳಿಸಲಾಗುವುದೆ ?" ಎಂದು ಹೇಳಿ ತಮ್ಮ ಪತ್ನಿಯ ರನ್ನು ಬಿಟ್ಟುಬಿಟ್ಟರು.

ಅರುಂಧತಿಯ ಹೊರತು ಉಳಿದ ಆರುಮಂದಿ ಮುನಿ ಪತ್ನಿಯರೂ ಗಂಗಾತೀರಕ್ಕೆ ಹೋಗಿ ಆರು ಮುಖಗಳಿರುವ ಬಾಲಕನನ್ನು ನೋಡಿದರು. ಕೂಡಲೇ ಆರು ಮಂದಿಯಲ್ಲಿಯೂ ಸ್ತನ್ಯವು ತುಂಬಿತು. ಹುಡುಗನು ಆರು ಮುಖಗಳಿಂದ ಮಂದಿ ತಾಯಂದಿರ ಹಾಲು ಕುಡಿದನು. ದೇವನು ಬಂದು ಆ ಹುಡುಗನಿಗೆ ಜಾತ ಮಾಡಿ, ಕುಮಾರಸ್ವಾಮಿ ಎಂದು ನಾಮ ಮಾಡಿದನು. ಅವನಿಗೆ ಷಣ್ಮುಖನೆಂದೂ, ನೆಂದೂ, ಗುಹನೆಂದೂ ಅನೇಕ ಹೆಸರುಗಳಿವೆ. ಪತ್ನಿಯರು ಕುಮಾರಸ್ವಾಮಿಯೊಂದಿಗೆ, " ಗಂಡಂದಿರು ನಮ್ಮನ್ನು ಹೊರದೂಡಿದರು, ನಮಗೇನು ಗತಿ ?" ಎಂದು ಕೇಳಲು, " ನಿಮ್ಮ ಮಗನೇ, ನೀವು ನನಗೆ ತಾಯಂ ನನ್ನೊಂದಿಗಿರಿ" ಎಂದನು ಕುಮಾರಸ್ವಾಮಿ.

ಕುಮಾರಸ್ವಾಮಿ ದಿನದಿನ ಪ್ರವರ್ಧ ನಾಗುತ್ತಾ, ಗುಡ್ಡಗಳ ಮೇಲೆ ಆಡುತ್ತ, ಹುಲಿ ಗಳ ಮೇಲೆ ಸವಾರಿ ಮಾಡುವನು. ಅವನಿಗೆ ಬಿಲ್ಲು ದೊರಕಿತು. ಆದರಿಂದ ಅವನು ಬಾಣಗ ಬಿಟ್ಟು ಕ್ರೌಂಚಪರ್ವತ ಶಿಖರವನ್ನು ಖಂಡಿಸಿ ಆಗ ಆ ಪರ್ವತದ ಮೇಲಿದ್ದ ರಾಕ್ಷಸರು ಕು ಸ್ವಾಮಿಯ ಮೇಲೆ ಯುದ್ಧಕ್ಕೆ ಬಂದರು. ಕು ಸ್ವಾಮಿ ಅವರನ್ನೆಲ್ಲಾ ಕೊಂದುಬಿಟ್ಟನು.

ಇಷ್ಟರೊಳಗೆ ಶಿವಪಾರ್ವತಿಯರಿಗೆ ಇಪ್ಪತ್ತೊ ಮಂದಿ ಮಕ್ಕಳು ಹುಟ್ಟಿದರು. ಅವರೆಲ್ಲಾ ಬೇರ ಗಣಗಳಿಗೆ ಮೂಲಪುರುಷರಾಗಿ ಗಣಪತಿಗಳೆನಿಸಿ



# ೧೨೧. ಪ್ರಾಚೀನ ಗ್ರೀಕು ವ್ಯಾಯಾಮ ಕ್ರೀಡೆಗಳು

...ವ್ಯಾಯಾಮ ಕ್ರೀಡೆಗಳನ್ನು ಪ್ರಾರಂಭಿಸಿದವರು ಗ್ರೀಕರೇ ಎಂದು ಹೇಳುತ್ತಾರೆ. ಕೆಳಗೆ ತೋರಿಸಿದ ...ಚೀನ ಶಿಲ್ಪಗಳಲ್ಲಿ ಮಲ್ಲಯುದ್ಧ, ನಾಯಿ ಬೆಕ್ಕು ಜಗಳ, ಚೆಂಡಾಟ, ಹಾಕೀ ಆಟಗಳ ಚಿತ್ರಗಳಿವೆ.



Photo by Hirdayesh V



ಬಹುಮಾನ
ಪಡೆದ ಶೀರ್ಷಿಕೆ

ಮೂರ್ತಿ ಚಿಕ್ಕದಾದರೂ
ಧರಿಸಿದ ಪಾತ್ರ ದೊಡ್ಡದು

ಕಳುಹಿಸಿದವರು
ವೈ. ಎಸ್. ಕೃಷ್ಣಮ

Photo by S. B. Takalkar



ಟೆಲ್ ಕಲ್ಪನಾ, ಪಿನೇ ಬ್ಲಾಕ್,
ನಗರ, ಬೆಂಗಳೂರು-೧೧.

**ಆಕೃತಿ ಒಂದಾದರೂ**
**ಚಿತ್ರಿಸಿದ ಚಾತುರ್ಯ ಹಿರಿದು**

ಬಹುಮಾನ
ಪಡೆದ ಶೀರ್ಷಿಕೆ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೦







★ ಮೇಲಿನ ಫೋಟೋಗಳಿಗೆ ಶೀರ್ಷಿಕೆಗಳು ಜನವರಿ ೧೫ ರೊಳಗೆ ತಲಪಬೇಕು.

★ ಶೀರ್ಷಿಕೆಗಳು ಒಂದಕ್ಕೊಂದು ಸರಿಹೊಂದುವಂತಿರಬೇಕು. ಗೆದ್ದ ಶೀರ್ಷಿಕೆಗಳು ಮಾರ್ಚ್ ೭೨ ರ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.

# ಚಂದಮಾಮ

## ಈ ಸಂಚಿಕೆಯಲ್ಲಿರುವ ಕಥೆಗಳು:



ಎರಡನೇ ಹೊದಿಕೆಯ ಚಿತ್ರ:

**ಪ್ರಜಾರಾಜ್ಯ ದಿನೋತ್ಸವ–೧**

ಮೂರನೇ ಹೊದಿಕೆಯ ಚಿತ್ರ:

**ಪ್ರಜಾರಾಜ್ಯ ದಿನೋತ್ಸವ–೨**

Printed by B. V. REDDI at The Prasad Process Private Ltd., and Published by B. VISWANATHA REDDI for Chandamama Publications, 2 & 3, Arcot Road, Madras-26. Controlling Editor: 'CHAKRAPANI'

## ಕುಟುಂಬದ ಎಲ್ಲರಿಗೂ ಆರೋಗ್ಯಕರ

# ಫಾಸ್ಫೋಮಿನ್®




ವಿಟಮಿನ್ ಬಿ ಕಾಂಪ್ಲೆಕ್ಸ್ ಮತ್ತು ಮಲ್ಟಿಪಲ್ ಗ್ಲಿಸರೊ ಫಾಸ್ಫೇಟ್ಸ್ ಯುಕ್ತವಾದ ಫಾಸ್ಫೋಮಿನ್ ಸಮೃದ್ಧ ಟಾನಿಕ್ ಆಗಿದೆ. ಇದು ನಿಮ್ಮ ಕುಟುಂಬದ ಎಲ್ಲರನ್ನೂ ಉಲ್ಲಾಸಿತರಾಗಿಯೂ ಆರೋಗ್ಯವಂತರಾಗಿಯೂ ಇಡುತ್ತದೆ. ಮನೆಯಲ್ಲಿ ಫಾಸ್ಫೋಮಿನ್ ಇರುವಾಗ ಆಯಾಸ ಮತ್ತು [illegible]ದ ಮಾತೇ ಇಲ್ಲ. ಫಾಸ್ಫೋಮಿನ್ ಶಕ್ತಿಯನ್ನು ವೃದ್ಧಿಸುತ್ತದೆ. ಹಸಿವನ್ನು ಉದ್ದೀಪನಗೊಳಿಸುತ್ತದೆ. ಆರೋಗ್ಯವನ್ನು ರಕ್ಷಿಸುತ್ತದೆ. ದೇಹದ ಪ್ರತಿರೋಧಕ ಶಕ್ತಿಯನ್ನು ಬಲಪಡಿಸುತ್ತದೆ. ಫಾಸ್ಫೋಮಿನ್‌ನಿಂದ ಕುಟುಂಬದ ಎಲ್ಲರೂ ಆರೋಗ್ಯವಂತರಾಗಿರುತ್ತಾರೆ.



ಫಾಸ್ಫೋಮಿನ್...
ಹಣ್ಣುಗಳ ರುಚಿಯಿರುವ
ಹಸುರು ಬಣ್ಣದ
ವಿಟಮಿನ್ ಟಾನಿಕ್

SQUIBB® SARABHAI CHEMICALS



Shilpi-HPMA-31A/71 Kan.

# ರೇಖಾಗಣಿತ ಸುಲಭ ಮತ್ತು ಭೂವಿವರಣೆ ವರ್ಣರಂಜಿತವಾಗಿ ಮಾಡಿ

ಪೈಥಾಗೊರಸ್‌ನ ಸಿದ್ಧಾಂತಗಳನ್ನು ಯಶಸ್ವಿಯಾಗಿ ನಿದರ್ಶಿಸಿರಿ, ಭೂಪಟಗಳನ್ನು ವರ್ಣರಂಜಿತವಾಗಿ ಬಿಡಿಸಿರಿ .. ಆದಕ್ಕಾಗಿ ಕ್ಯಾಮ್ಲಿನ್ ಇನ್‌ಸ್ಟ್ರುಮೆಂಟ್ ಪೆಟ್ಟಿಗೆ ಮತ್ತು ಬಣ್ಣದ ಪೆನ್ಸಿಲುಗಳನ್ನು ಉಪಯೋಗಿಸಿರಿ. ಮೊದಲನೆಯದು ಉಪಯೋಗಕ್ಕೆ ನಿಷ್ಕೃಷ್ಟವಾಗಿದೆ ಮತ್ತು ನೋಡಲು ಆಕರ್ಷಕವಾಗಿದೆ; ಎರಡನೆಯದರ ಸೀಸವು ಮೃದು ಮತ್ತು ನಯವಾಗಿದೆ— ಇವೆರಡೂ ಹೆಚ್ಚು ಕಾಲ ಉಪಯೋಗಕ್ಕೆ ಬೀಳುತ್ತವೆ, ಬೇಗನೆ ಸವೆದು ಹೋಗುವುದಿಲ್ಲ. ಮಿತವ್ಯಯಕರವೂ ಆಗಿವೆ. ನಿಮಗಾಗಿಯೂ ಕ್ಯಾಮ್ಲಿನ್‌ರವರ ವಿಸ್ತೃತ ಶ್ರೇಣಿಯ ಆರ್ಟ್ ಮೆಟೀರಿಯಲ್‌ಗಳಿವೆ — ವ್ಯಾಕ್ಸ್ ಕ್ರೇಯಾನ್ಸ್, ವಾಟರ್ ಕಲರ್ಸ್, ಪೋಸ್ಟರ್ ಕಲರ್ಸ್ ಇತ್ಯಾದಿ. ನಿಮ್ಮ ಸಮೀಪದ ವ್ಯಾಪಾರಿಯಲ್ಲಿ ವಿಚಾರಿಸಿರಿ.




## ಕ್ಯಾಮ್ಲಿನ್

ಬಣ್ಣದ ಪೆನ್ಸಿಲುಗಳನ್ನು ಮತ್ತು ಇನ್‌ಸ್ಟ್ರುಮೆಂಟ್ ಬಾಕ್ಸ್ ಕೊಳ್ಳಿರಿ.




ಕ್ಯಾಮ್ಲಿನ್ ಪ್ರೈವೇಟ್
ಲಿಮಿಟೆಡ್
ಆರ್ಟ್ ಮೆಟೀರಿಯಲ್
ಡಿವಿಜನ್
ಜೆ. ಬಿ. ನಗರ,
ಬೊಂಬಾಯಿ-೫೯. ಭಾರತ.

